# ಕಟ್ಟಾಡಿಯವರ ಕಾದಂಬರಿಗಳಲ್ಲಿ ಮುಸ್ಲಿಂ ಸಮಾಜದ ಸ್ವರೂಪ

(೨೦೧೬-೧೭ನೆಯ ಸಾಲಿನ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧ)


ಸಂಶೋಧಕರು

ನೋಂದಣಿ ಸಂಖ್ಯೆ : 160104030010





ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೧೭

# ಕಟ್ಪಾಡಿಯವರ ಕಾದಂಬರಿಗಳಲ್ಲಿ ಮುಸ್ಲಿಂ ಸಮಾಜದ ಸ್ವರೂಪ

(೨೦೧೬-೧೭ನೆಯ ಸಾಲಿನ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)



ನೋಂದಣಿ ಸಂಖ್ಯೆ: ೧೬೦೧೦೪೦೩೦೦೧೦



ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೧೬-೧೭

# ಕಟ್ಪಾಡಿಯವರ ಕಾದಂಬರಿಗಳಲ್ಲಿ ಮುಸ್ಲಿಂ ಸಮಾಜದ ಸ್ವರೂಪ

## ಪರಿವಿಡಿ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಆಧುನಿಕ ಕನ್ನಡ ಸಾಹಿತ್ಯವು ಕಾವ್ಯ, ಕಾದಂಬರಿ, ನಾಟಕ, ಪ್ರಬಂಧ, ವಿಮರ್ಶೆ ಮುಂತಾದ ಹಲವಾರು ಪ್ರಕಾರಗಳಲ್ಲಿ ಬೆಳೆದಿದೆ. ಈ ಪ್ರಕಾರಗಳಲ್ಲಿ ಕಾದಂಬರಿ ಪ್ರಕಾರವು ತನ್ನದೇ ಆದ ಸ್ಥಾನವನ್ನು ಹೊಂದಿದೆ. 'ಕಾದಂಬರಿ' ಪಾಶ್ಚಾತ್ಯರಿಂದ ಕನ್ನಡಕ್ಕೆ ಬಂದ ಸಾಹಿತ್ಯ ಪ್ರಕಾರವಾಗಿದೆ. ಕನ್ನಡದಲ್ಲಿ ಇದಕ್ಕೆ ಮೊದಲು 'ಕಾದಂಬರಿ' ಪ್ರಕಾರವಿರಲಿಲ್ಲ. ಈಗ ಕಾಣುವ 'ಕಾದಂಬರಿ' ಎಂಬ ಸ್ವರೂಪದಲ್ಲಿ ಇರಲಿಲ್ಲ. ಕಥಾ ಸರಿತ್ಸಾಗರ ಮತ್ತು ಬಾಣನ ಕಾದಂಬರಿ ಮುಂತಾದ ಕಡೆ ಕಾದಂಬರಿಯ ಮಾದರಿಗಳಿವೆ. ಈ ಮಾದರಿಗಳಿಗೂ ಭಿನ್ನವಾಗಿ ಆಧುನಿಕ ಕಾದಂಬರಿ ವಾಸ್ತವದಲ್ಲಿ ವೈವಿಧ್ಯತೆಯನ್ನು ಕಂಡುಕೊಂಡಿತು. ೧೯ನೆಯ ಶತಮಾನದಲ್ಲಿ ಕನ್ನಡ ಲೇಖಕರು ಪಾಶ್ಚಾತ್ಯ ಸಾಹಿತ್ಯದಲ್ಲಿರುವ ಕಾದಂಬರಿಗಳನ್ನು ಓದಿ ಪ್ರಭಾವಿತರಾಗಿ ಕನ್ನಡದಲ್ಲಿ ಕಾದಂಬರಿ ಬರೆಯಲು ಆರಂಭಿಸಿದಾಗ ಇದು ಹುಟ್ಟಿತು. ನವೋದಯ ಕಾಲಘಟ್ಟದ ಕಾದಂಬರಿಕಾರರಾದ ಗುಲ್ವಾಡಿ ವೆಂಕಟರಾಯರು, ಕೇರೂರು ವಾಸುದೇವಾಚಾರ್ಯ, ಎಂ.ಎಸ್. ಪುಟ್ಟಣ್ಣ, ಕಾರಂತರು, ಕುವೆಂಪು ಮುಂತಾದವರು ತಮ್ಮ ಕಾದಂಬರಿಯಲ್ಲಿ ತಮ್ಮ ಸುತ್ತಮುತ್ತ ಕಾಣುವ ಜನಸಾಮಾನ್ಯರ ಬದುಕಿನ ವಸ್ತುವನ್ನು ತೆಗೆದುಕೊಂಡು ಕಾದಂಬರಿಯನ್ನು ಕಟ್ಟತೊಡಗಿದರು. ಅದೇ ರೀತಿ ಪ್ರಗತಿಶೀಲ ಕಾದಂಬರಿಕಾರರಾದ ಅನಕೃ, ನಿರಂಜನ, ಕಟ್ಟಿಮನಿ ಅವರು ಸಮಾಜವಾದಿ ನೆಲೆ ಮತ್ತು ಪ್ರತಿಭಟನಾತ್ಮಕ ನೆಲೆಯಿಂದ ವಸ್ತುವನ್ನು ಆಯ್ದುಕೊಂಡು ಕಾದಂಬರಿ ರಚಿಸಿದರು. ನವ್ಯ ಕಾಲಘಟ್ಟದ ಕಾದಂಬರಿಕಾರರಾದ ಯು.ಆರ್. ಅನಂತಮೂರ್ತಿ, ಪಿ. ಲಂಕೇಶ್, ಶಾಂತಿನಾಥ ದೇಸಾಯಿ ಅವರು ವ್ಯಕ್ತಿಕೇಂದ್ರಿತ ನೆಲೆಯಲ್ಲಿ ಮತ್ತು ವ್ಯಕ್ತಿಯ ಅಸ್ತಿತ್ವವನ್ನು ವ್ಯಾಪ್ತಿಯಲ್ಲಿಟ್ಟುಕೊಂಡು

ಕಾದಂಬರಿ ನೆಯ್ಗೆ ಆರಂಭಿಸಿದರು. ಹಾಗೂ ದಲಿತ ಬಂಡಾಯ ಕಾದಂಬರಿಕಾರರಾದ ದೇವನೂರು ಮಹಾದೇವ, ಬೊಳುವಾರು ಮಹಮದ್ ಕುಂ.ಇ್, ಸಾರಾ ಅಬೂಬಕ್ಕರ್ ಇವರು ತಮ್ಮ ಕಲೆಗಳಲ್ಲಿ ಬದುಕಿನ ಬೇರೆ ಬೇರೆ ಸಮಸ್ಯೆಗಳನ್ನು ತಮ್ಮ ಕಾದಂಬರಿಗಳಲ್ಲಿ ತಂದಿದ್ದಾರೆ.

ಇಂತಹ ಯಾವ ಪಂಥಕ್ಕೂ ಸೇರದ ಜಯಂತ ಕಾಯ್ಕಿಣಿ, ವೈದೇಹಿ, ನಾಗವೇಣಿ, ಅಮರೇಶ ನುಗಡೋಣಿ, ಅಬ್ದುಲ್ ರಶೀದ್, ವಿವೇಕ ಶಾನಭೋಗ ಅವರು ಸಹ ಬರೆಯುತ್ತಿದ್ದಾರೆ. ೮೦ರ ದಶಕದಲ್ಲಿ ದಲಿತ ಬಂಡಾಯ ಕಾಲಘಟ್ಟದಲ್ಲಿ ಹಲವು ಸಂವೇದನೆಗಳು ಕಾಣಿಸಿಕೊಂಡವು. ಅವುಗಳಲ್ಲಿ ದಲಿತ ಸಂವೇದನೆ, ಸ್ತ್ರೀ ಸಂವೇದನೆ, ಗ್ರಾಮೀಣ ಸಂವೇದನೆ, ನಗರ ಸಂವೇದನೆ, ಮುಸ್ಲಿಂ ಸಂವೇದನೆ ಬಹುಮುಖ್ಯವಾದವು. ಈ ಸಂವೇದನೆಗಳ ಕಾಲಘಟ್ಟದಲ್ಲಿ ಆಯಾ ಜಾತಿ, ಧರ್ಮ, ಲಿಂಗಕ್ಕೆ ಸಂಬಂಧಿಸಿದಂತೆ ಬರಹಗಾರರು ಬರೆಯಲು ತೊಡಗಿದರು. ಕಾವ್ಯ ಪ್ರಕಾರದಲ್ಲಿ ಗುರುತಿಸಬಹುದಾದಂತಹವರು. ಶಿಶುನಾಳ ಶರೀಫರು ಮತ್ತು ನಿಸಾರ್ ಅಹಮದ್ ಸಣ್ಣ ಕತೆಯಲ್ಲಿ ಬರೆದಂತವರು. ಬೋಳವಾರು ಮಹಮದ್ ಕುಂಞ್, ಬಾನು ಮುಷ್ತಾಕ್, ಮುಮ್ತಾಜ್ ಹಾಗೆಯೇ ಕಾದಂಬರಿ ಪ್ರಕಾರದಲ್ಲಿ ಮುಸ್ಲಿಂ ಸಂವೇದನೆಯನ್ನೇ ಪ್ರಧಾನ ಆಶಯವಾಗಿ ಇಟ್ಟುಕೊಂಡು ಕಾದಂಬರಿ ರಚಿಸಿದವರು ಹಲವರಿದ್ದಾರೆ. ಅವರಲ್ಲಿ ಪ್ರಮುಖ ಕಾದಂಬರಿಕಾರರೆಂದರೆ ಫಕೀರ್ ಮುಹಮ್ಮದ್ ಕಟ್ಪಾಡಿ. ಇವರು ಬದುಕಿನ ವಿವಿಧ ಮುಖಗಳನ್ನು ಕೇಂದ್ರವಾಗಿಟ್ಟುಕೊಂಡು ಕಾದಂಬರಿಯನ್ನು ರಚಿಸಿದ್ದಾರೆ.

೭೦ರ ದಶಕರದಲ್ಲಿ ಕರ್ನಾಟಕದಲ್ಲಿ ಹಾಗೂ ಕನ್ನಡ ಸಾಹಿತ್ಯ, ಸಂಸ್ಕೃತಿ ಲೋಕದಲ್ಲಿ ಅನೇಕ ಪಲ್ಲಟಗಳು ಜರುಗಿದವು. ಅವುಗಳಲ್ಲಿ ಇದುವರೆಗೂ ಬೇರೆ ಸಮುದಾಯಗಳ ಲೇಖಕರು ಮುಟ್ಟಲಾಗಿರದ ಅನುಭವ ಲೋಕವು ಕನ್ನಡ ಸಾಹಿತ್ಯ ಲೋಕದೊಳಗೆ ಪ್ರವೇಶ ಪಡೆದಿದ್ದು ಒಂದು. ಅನೇಕ ಲೇಖಕರು ತಮ್ಮ ಸಮುದಾಯದ ಅನುಭವವನ್ನು ಸಾಹಿತ್ಯದ ಬೇರೆ ಬೇರೆ ಪ್ರಕಾರಗಳಲ್ಲಿ ಕಾಣಿಸಲು ಶುರು ಮಾಡಿದರು. ಅವರಲ್ಲಿ ಮುಸ್ಲಿಂರು, ದಲಿತರು, ಸ್ತ್ರೀಯರು ಮುಖ್ಯರು. ಮುಸ್ಲಿಂ ಸಮುದಾಯದ ಅನುಭವ ಮತ್ತು ಸಂವೇದನೆಗಳಿಗೆ ಧ್ವನಿ ನೀಡಿದವರು. ಬೊಳುವಾರು ಮಹಮ್ಮದ್ ಕುಂ.ಇ್, ಸಾರಾ ಅಬೂಬಕ್ಕರ್, ಅಬ್ದುಲ್ ರಶೀದ್, ರಂಜಾನ್ ದರ್ಗಾ, ಬಾನು ಮುಷ್ತಾಕ್, ಕೆ ಷರೀಫಾ, ಫಕೀರ ಮುಹಮ್ಮದ್ ಕಟ್ಪಾಡಿ ಅವರು. ಇವರಲ್ಲಿ ಹೆಚ್ಚಿನವರು ತಮ್ಮ ಅಭಿವ್ಯಕ್ತಿಗೆ ಕಥಾ ಪ್ರಕಾರಗಳನ್ನು ಆರಿಸಿಕೊಂಡರು. ಮುಸ್ಲಿಂ ಸಮುದಾಯದ ಬದುಕನ್ನು ತಮ್ಮ ಕಾದಂಬರಿಗಳಲ್ಲಿ ಅನಾವರಣಗೊಳಿಸಿದರು. ವಿಶೇಷವೆಂದರೆ ಈ ಲೇಖಕರಲ್ಲಿ ಹೆಚ್ಚಿನವರು ದಕ್ಷಿಣ ಕನ್ನಡದಿಂದ ಬಂದವರು. ಬ್ಯಾರಿ ಮುಸ್ಲಿಂ ಸಮುದಾಯಕ್ಕೆ ಸೇರಿದವರು.

ಇವರ ಬರಹದಿಂದ ಹೊಸ ಬಗೆಯ ಚರ್ಚೆಗಳು ಕನ್ನಡದಲ್ಲಿ ಆರಂಭಗೊಂಡವು. ಈ ಬಗೆಯ ಸಂಚಲನ ಉಂಟುಮಾಡಿದವರಲ್ಲಿ ಫಕೀರ್ ಮುಹಮ್ಮದ್ ಕಟ್ಪಾಡಿಯವರ ಪಾತ್ರವು ಬಹಳ ಮಹತ್ವದ್ದಾಗಿದೆ.

**ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ :**

ಅಧ್ಯಯನದ ಉದ್ದೇಶಗಳು ಈ ಕೆಳಗಿನಂತಿವೆ.

* ಕಾದಂಬರಿ ಸಾಹಿತ್ಯ ಪ್ರಕಾರದ ಮೂಲಕ ಕನ್ನಡ ಸಾಹಿತ್ಯಕ್ಕೆ ಮುಸ್ಲಿಂ ಸಮಾಜದ ಅನುಭವ ಲೋಕ ಮತ್ತು ಅವರ ಸಂವೇದನೆಗಳ ಸೇರ್ಪಡೆಯ ಸ್ವರೂಪವನ್ನು ಅರಿತುಕೊಳ್ಳುವುದು. ಅದರಲ್ಲೂ ಮುಸ್ಲಿಂ ಸಮಾಜದಲ್ಲಿ ಪುರುಷ ಪ್ರಧಾನ ಸಮಾಜ ಹಾಗೂ ಧಾರ್ಮಿಕ ಮೂಲಭೂತವಾದ, ಪುರೋಹಿತಶಾಹಿ ದಮನಕ್ಕೆ ಒಳಗಾಗಿರುವ ಮಹಿಳೆಯರ ಬಾಳನ್ನು ಮುಸ್ಲಿಂ ಲೇಖಕರು ಹೇಗೆ ವಿಮರ್ಶಾತ್ಮಕವಾಗಿ ಕಟ್ಟಿಕೊಟ್ಟಿದ್ದಾರೆ ಎಂಬುದನ್ನು ಶೋಧಿಸುವುದು.

*. ಕಟ್ಪಾಡಿಯವರ ಎರಡು ಕಾದಂಬರಿಗಳಲ್ಲಿ ಮುಸ್ಲಿಂ ಲೋಕದ ಅನುಭವಗಳು ವಿಭಿನ್ನ ರೀತಿಯಲ್ಲಿ ಚಿತ್ರಿತಗೊಂಡಿವೆ. ಮುಸ್ಲಿಂ ಸಮುದಾಯದಲ್ಲಿರುವ ವರ್ಗ ವೈರುಧ್ಯ, ಪುರುಷವಾದದ ದಬ್ಬಾಳಿಕೆ, ಪುರೋಹಿತಶಾಹಿಯ ಅಮಾನುಷತೆ ಈ ಮೂರು ಯಜಮಾನ ಶಕ್ತಿಗಳ ದಬ್ಬಾಳಿಕೆಗಳ ಹಲವಾರು ಮುಖಗಳು ಚಿತ್ರಣಗೊಂಡಿವೆ. ಸಾಮಾಜಿಕವಾದ, ಧಾರ್ಮಿಕವಾದ ಅನ್ಯಾಯ, ಅಸಮಾನತೆಗಳು ಕಟ್ಪಾಡಿಯವರ ಕಾದಂಬರಿಗಳಲ್ಲಿ ಯಾವ ಸ್ವರೂಪದಲ್ಲಿ ಚಿತ್ರಿತವಾಗಿವೆ ಎಂಬುದನ್ನು ಶೋಧಿಸುವುದು.

* ಕಟ್ಪಾಡಿಯವರು ಬಂಡಾಯ ಘಟ್ಟದಲ್ಲಿ, ಬಂಡಾಯದ ನೆಲೆಯಲ್ಲಿ ಬರೆಯಲು ಪ್ರಾರಂಭಿಸಿದರು. ಇವರ ಕಾದಂಬರಿಗಳಲ್ಲಿ ಸ್ತ್ರೀ ಸಂವೇದನೆಯ ಜೊತೆಗೆ ಮುಸ್ಲಿಂ ಸಂವೇದನೆಯನ್ನು ನೋಡಬಹುದು. ಹೊಸಹೊಸ ಸಂವೇದನೆಗಳ ಮೂಲಕ ಹೊಸ ಅಲೆಯನ್ನು ಎಬ್ಬಿಸಿದವರು ಕಟ್ಪಾಡಿಯವರು. ಹೊಸ ರೀತಿಯ ಕಾದಂಬರಿಗಾರಿಕೆ ಮತ್ತು ವಸ್ತುವನ್ನು ಕುರಿತು ವಿಭಿನ್ನ ಪರಿಭಾಷೆಯ ಮೂಲಕ ಕನ್ನಡ ಕಥಾ ಸಾಹಿತ್ಯಕ್ಕೆ ಹೊಸ ಆಯಾಮವನ್ನು ತಂದುಕೊಟ್ಟರು.

* ಸ್ವತಃ ಮುಸ್ಲಿಂ ಧರ್ಮದವರಾದ ಇವರು ತಮ್ಮ ಧರ್ಮದಲ್ಲಿರುವಂತ ಅಮಾನವೀಯ ಮೌಲ್ಯಗಳನ್ನು, ಆಚಾರ, ಪದ್ಧತಿಗಳನ್ನು ಪುರುಷನ ದೌರ್ಬಲ್ಯಗಳನ್ನು ಬಯಲಿಗೆಳೆದಿದ್ದಾರೆ. ಮುಸ್ಲಿಂ ಸಮಾಜದಲ್ಲಿರುವಂತಹ ತಲಾಖ್, ನಿಖಾಹ್, ಘೋಷ ಪದ್ಧತಿಗಳನ್ನು ಕುರಿತು ಹಾಗೂ ಪುರುಷರು ಇದನ್ನು ಒಂದು ಅಸ್ತ್ರವಾಗಿ ಬಳಸಿಕೊಳ್ಳುವಂತಹ ರೀತಿಯನ್ನು ಕುರಿತು ತಮ್ಮ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಇವರ ಉದ್ದೇಶ ತಮ್ಮ ಧರ್ಮದ ನ್ಯೂನ್ಯತೆಗಳನ್ನು, ನಿಯಮಗಳನ್ನು

ಬೇರೆಯವರಿಗೆ ತಿಳಿಸುವುದಷ್ಟೇ ಆಗಿರದೆ ಅರಿವು ಮೂಡಿಸುವುದೂ ಆಗಿತ್ತು. ಮುಸ್ಲಿಂ ಹೆಣ್ಣುಮಕ್ಕಳು ಶಿಕ್ಷಿತರಾಗುವುದು, ಜೊತೆಗೆ ಜಾಗೃತಗೊಳ್ಳುವುದೂ ಆಗಿತ್ತು. ಅನ್ಯಾಯಕ್ಕೊಳಗಾಗುತ್ತಿರುವ ಹೆಣ್ಣುಮಕ್ಕಳಲ್ಲಿ ಅರಿವು ಜೊತೆಗೆ ಅನ್ಯಾಯಕ್ಕೆ ಒಳಗಾಗಿದ್ದ ಹೆಣ್ಣಿನ ಸ್ಥಿತಿಗತಿಯ ಪರಿಚಯವು ಮುಖ್ಯವಾಗಿತ್ತು. ಇಂತಹ ಎಲ್ಲ ವಿಷಯಗಳ ಹಾಗೂ ಪ್ರಮುಖ ಅಂಶಗಳ ಅಧ್ಯಯನವೇ ಈ ನಿಬಂಧದ ಉದ್ದೇಶವಾಗಿದೆ. ಜೊತೆಗೆ ಈ ನಿಬಂಧದಲ್ಲಿ ಮೇಲೆ ಹೇಳಿದ ವಿಷಯಗಳೆಲ್ಲವೂ ಕಟ್ಪಾಡಿಯವರ ಕಾದಂಬರಿಯಲ್ಲಿ ಹೇಗೆ ಮೂಡಿಬಂದಿದೆ ಎಂಬುದರ ಅಧ್ಯಯನವು ಮುಖ್ಯವಾಗಿದೆ. ಆದ್ದರಿಂದ ಈ ನಿಬಂಧದ ಮೂಲಕ ಇಂತಹ ಅಧ್ಯಯನದ ಮೇಲೆ ಬೆಳಕು ಹರಿಸಲಾಗಿದೆ.

* ಸಾಮಾಜಿಕ ಸ್ತರವಿನ್ಯಾಸದಲ್ಲಿ ಶೋಷಣೆ, ಧರ್ಮ ದಬ್ಬಾಳಿಕೆಗೆ ಸಂಬಂಧಿಸಿದಂತೆ ಎರಡು ರೀತಿಯ ವಲಯಗಳನ್ನು ಗುರುತಿಸಬಹುದಾಗಿದೆ. ಒಂದು ಶೋಷಕ, ಮತ್ತೊಂದು ಶೋಷಿತ. ಧಾರ್ಮಿಕ, ಸಾಮಾಜಿಕ, ಆರ್ಥಿಕ ದಬ್ಬಾಳಿಕೆ, ಶೋಷಣೆಗೆ ಒಳಗಾಗುವವರು ಇದ್ದರೆ ಅವರನ್ನು ಶೋಷಿಸುವವರು ಸಹ ಇದ್ದೇ ಇರುತ್ತಾರೆ. ಈ ಎರಡು ವಲಯಗಳು ಪರಸ್ಪರ ವಿರೋಧದಿಂದ ಕೂಡಿದ್ದರೂ ಅವುಗಳ ನಡುವೆ ಅನೇಕ ಬಗೆಯ ಸಂಬಂಧಗಳಿವೆ. ಈ ಸಂಬಂಧಗಳಲ್ಲಿ ಅನೇಕ ಸಂಘರ್ಷ, ರಾಜಿ, ಕೊಡುಕೊಳೆ ಇರುತ್ತವೆ. ಈ ವೈರುಧ್ಯಗಳು ಸಮಾಜದ ಎಲ್ಲ ಧರ್ಮದ ಎಲ್ಲ ಜಾತಿಯ ಒಳಗಡೆಯೂ ಅಂತರ್ಗತವಾಗಿರುತ್ತವೆ. ಇವು ಸಮಾಜದ ಮನುಷ್ಯ ಸಂಬಂಧಗಳನ್ನು ನಿರ್ಧರಿಸುತ್ತಿರುತ್ತವೆ. ಈ ಮನುಷ್ಯ ಸಂಬಂಧಗಳನ್ನು ಆ ಮೂಲಕ ಸಮಾಜದ ಸ್ವರೂಪವನ್ನು ಸೃಜನಶೀಲ ಲೇಖಕರು ತಮ್ಮದೇ ಆದ ಬಗೆಯಲ್ಲಿ ಕಟ್ಟಿಕೊಡುವರು. ಈ ಹಿನ್ನೆಲೆಯಲ್ಲಿ ಕಟ್ಪಾಡಿಯವರ ಕಾದಂಬರಿಗಳಲ್ಲಿ ಮುಸ್ಲಿಂ ಸಮಾಜದ ಲೋಕವನ್ನು ಹೇಗೆ ಕಟ್ಟಿಕೊಟ್ಟಿದ್ದಾರೆ ಎಂದು ಗುರುತಿಸುವುದು.

* ಕಟ್ಪಾಡಿಯವರ ಕತೆಗಳು ಕರಾವಳಿ ಮುಸ್ಲಿಂ ಬದುಕಿನ ಅನೇಕ ವಿನ್ಯಾಸಗಳನ್ನು ಚಿತ್ರಿಸುತ್ತವೆ. ಅವುಗಳಲ್ಲಿ ಸ್ತ್ರೀಪಾತ್ರಗಳು ವಿಭಿನ್ನ ದೃಷ್ಟಿಕೋನದಿಂದ ಚಿತ್ರಿಸುತ್ತವೆ. ಹಾಗೆ ಕಂಡರೆ ಕಟ್ಪಾಡಿಯವರು ಕಾದಂಬರಿಗಳು ಮುಸ್ಲಿಂ ಸಮುದಾಯಕ್ಕೆ ಸಂಬಂಧಿಸಿದಂತೆ ಕಂಡುಬಂದರೂ ಆಳದಲ್ಲಿ ಅವು ಇಡೀ ಸಮಾಜದ ಸ್ತ್ರೀ ಸಂವೇದನೆಯಯನ್ನು ಚಿತ್ರಿಸುವಂತಹ ವಿಶಿಷ್ಟ ವಿಸ್ತರಣೆಯನ್ನು ಕಾದಂಬರಿಗಳು ಹೊಂದಿವೆ.

* ವಿಶೇಷವಾಗಿ ಈ ನಿಬಂಧವು ಕಟ್ಪಾಡಿಯವರ ಕಾದಂಬರಿಗಳಲ್ಲಿ ಹೆಣ್ಣಿನ ಜೀವನ, ಸ್ಥಿತಿಗತಿ, ಸ್ಥಾನಮಾನ, ವ್ಯಕ್ತಿತ್ವವನ್ನು ಓದುಗರ ಮನಸ್ಸು ಮುಟ್ಟುವಂತೆ ರಚಿಸಿದಲ್ಲದೆ ಅವರ ವಿಚಾರಧಾರೆಯ ಹೆಣ್ಣಿನ ಮನಸ್ಥಿತಿ ಆಕೆಯನ್ನು ಸಮಾಜ ನೋಡುವ ವಿಭಿನ್ನ ರೀತಿ ಹಾಗೂ ಸ್ವೀಕರಿಸುವ

ಮನೋಭಾವ ಎಂತಹದ್ದು. ಹೀಗೆ ಹಲವು ವಿಚಾರಗಳ ಶೋಧನೆ ನಡೆಯಬೇಕಾಗಿದೆ. ಆದ್ದರಿಂದ ಕಟ್ಪಾಡಿಯವರ ಕಾದಂಬರಿಗಳಲ್ಲಿ ಮುಸ್ಲಿಂ ಸಮಾಜದ ಸ್ವರೂಪದ ವಿಶ್ಲೇಷಣೆ ಹಾಗೂ ಅಧ್ಯಯನ ಅಗತ್ಯವಾಗಿದ್ದು, ಅದನ್ನು ಈ ನಿಬಂಧದಲ್ಲಿ ಪ್ರಯತ್ನಿಸಲಾಗಿದೆ. ಇವರ ಕಾದಂಬರಿಯಲ್ಲಿರುವಂತಹ ಸಂವೇದನೆಯನ್ನು ಹೊರತೆಗೆಯುವ ಪ್ರಯತ್ನ ಈ ಅಧ್ಯಾಯನದಲ್ಲಿದೆ. ಆದ್ದರಿಂದ ಕನ್ನಡ ಸಾಹಿತ್ಯ ಅಭಿವ್ಯಕ್ತಿಯಲ್ಲಿ ಸ್ತ್ರೀ ಮತ್ತು ಸ್ತ್ರೀ ಸಂವೇದನೆಗಳು ಕಾಣಿಸಿಕೊಂಡ ಕ್ರಮವನ್ನು ಗ್ರಹಿಸುವ, ವಿವರಿಸುವ ಮತ್ತು ವಿಮರ್ಶಿಸುವ ಪ್ರಯತ್ನವನ್ನು ಈ ಅಧ್ಯಯನ ಒಳಗೊಂಡಿದೆ.

**ವ್ಯಾಪ್ತಿ :**

ಪ್ರಸ್ತುತ ಈ ಅಧ್ಯಯನದಲ್ಲಿ ಪ್ರಧಾನವಾಗಿ ಫಕೀರ್ ಮುಹಮ್ಮದ್ ಕಟ್ಪಾಡಿಯವರು ರಚಿಸಿದ ಕಾದಂಬರಿಗಳನ್ನು ನೋಡಲಾಗಿದೆ. ಈ ಕಾದಂಬರಿಗಳ ಚರ್ಚೆಯಲ್ಲಿ ಪ್ರಸಂಗಿಕವಾಗಿ ಅವರ ಕತೆಗಳನ್ನು ಹಾಗೂ ಸಾರಾ ಅಬೂಬಕ್ಕರ್, ಬೊಳುವಾರು ಮಹಮ್ಮದ್, ಅಬ್ದುಲ್ ರಶೀದ್ ಮುಂತಾದವರ ಇದೇ ವಸ್ತುವುಳ್ಳ ಕೃತಿಗಳನ್ನು ಬಳಸಿಕೊಂಡಿದೆ. ಈ ಅಧ್ಯಯನದಲ್ಲಿ ಕಟ್ಪಾಡಿಯವರ ಕಾದಂಬರಿಗಳ ಮೇಲೆ ಬಂದಂತಹ ವಿಮರ್ಶೆ, ಕೃತಿಗಳನ್ನು, ಲೇಖನಗಳನ್ನು ಚರ್ಚೆಗೆ ಒಳಪಡಿಸಲಾಗಿದೆ.

## ಅಧ್ಯಾಯ : ಎರಡು

# ಫಕೀರ ಮಹಮ್ಮದ್ ಕಟ್ಪಾಡಿ : ಜೀವನ ಹಿನ್ನೆಲೆ

ಆಧುನಿಕ ಕನ್ನಡ ಸಾಹಿತ್ಯದ ದಲಿತ ಬಂಡಾಯ ಸಾಹಿತ್ಯ ಸೃಷ್ಟಿಯ ಸಂದರ್ಭದಲ್ಲಿ ಬಂದಂತಹ ಮುಸ್ಲಿಮ್ ಸಂವೇದನೆಯ ಕತೆ, ಕಾದಂಬರಿಕಾರರಲ್ಲಿ ಮುಖ್ಯರಾದವರು ಫಕೀರ್ ಮುಹಮ್ಮದ್ ಕಟ್ಪಾಡಿ. ಇವರು ಉಡುಪಿ ಜಿಲ್ಲೆಯ ಬಾರ್ಕೂರಿನಲ್ಲಿ ೧೯೪೯ರ ಜೂನ್ ೨೫ರಂದು ಜನಿಸಿದರು. ತಂದೆ ಲತೀಬ್ ಕೆ. ಅಹಮ್ಮದ್, ತಾಯಿ ಅಮೀನಾ. ಪ್ರಾಥಮಿಕ ವಿದ್ಯಾಭ್ಯಾಸ ಕಟ್ಪಾಡಿಯಲ್ಲಿ, ಕಾಲೇಜು ಶಿಕ್ಷಣ ಕುಂದಾಪುರದಲ್ಲಿ ಪೂರೈಸಿದರು.

ಕತೆ–ಕಾದಂಬರಿಕಾರರಿಗೂ, ಸಮಾಜದ ಜತೆಗೂ ಇರುವ ಸಂಬಂಧ ಅನನ್ಯವಾದುದು. ಕಾದಂಬರಿಕಾರರು ತಾವು ಬೆಳೆದ ಪರಿಸರದ ಜೊತೆಗೆ ತಮ್ಮ ಪ್ರತಿಭೆ, ಸೃಜನಶೀಲತೆಯಿಂದ ಸೂಕ್ಷ್ಮದೃಷ್ಟಿಯಲ್ಲಿ ಸಾಹಿತ್ಯ ರಚನೆ ಮಾಡುತ್ತಾರೆ. ಆ ಮೂಲಕ ತಮ್ಮ ಅನುಭವ ಜಗತ್ತಿಗೂ ಮತ್ತು ಕಲ್ಪನೆಯ ಜಗತ್ತಿಗೂ ಜೀವ ತುಂಬುವರು. ಕಟ್ಪಾಡಿ ಅವರು ಈ ದೃಷ್ಟಿಯಿಂದ ಕನ್ನಡ ಕಥನ ಸಾಹಿತ್ಯದ ಬಹುಮುಖ್ಯ ಲೇಖಕರು. ಇವರು ವಿದ್ಯಾರ್ಥಿ ಜೀವನದಲ್ಲಿ ಬಿ.ಪಿ. ಕಾಳೆ, ಎನ್. ನರಸಿಂಹಯ್ಯ, ಮಾ.ಭಿ. ಶೇಷಗಿರಿರಾವ್ ಮುಂತಾದವರ ಪತ್ತೇದಾರಿ ಕಾದಂಬರಿ ಓದುವ ಮೂಲಕ ಕಾದಂಬರಿ ಬರೆಯಲು ಆಸಕ್ತಿ ಮೂಡಿಸಿಕೊಂಡವರು. ಜೊತೆಗೆ ತ.ರಾ.ಸು., ಅ.ನ.ಕೃ, ಕೃಷ್ಣಮೂರ್ತಿ, ಪುರಾಣಿಕ, ತ್ರಿವೇಣಿ ಅವರ ಕಾದಂಬರಿಗಳು ಕಟ್ಪಾಡಿ ಅವರನ್ನು ಕತೆಗಾರ ಮತ್ತು ಕಾದಂಬರಿಕಾರರಾಗಿ ಬೆಳೆಯಲು ಪ್ರೇರಣೆ ನೀಡಿದವು. ಕರಾವಳಿಯ ಬ್ಯಾರಿ ಮುಸ್ಲಿಮರಲ್ಲಿರುವ ತಲಾಖ್ ಮುಂತಾದ ಧರ್ಮಾಚರಣೆಗಳನ್ನು ಕಣ್ಣಾರೆಕಂಡು ಅವರು ಕಾದಂಬರಿ ಬರೆಯಲು ಪ್ರೇರಣೆ ಪಡೆದರು. ತಮ್ಮ ಬದುಕಿನಲ್ಲಿ ನಡೆದ ಹಲವಾರು ಘಟನೆಗಳನ್ನು ವಿಭಿನ್ನ ರೀತಿಯಲ್ಲಿ ತಮ್ಮ ಕಾದಂಬರಿ, ಕತೆಗಳಲ್ಲಿ ಚಿತ್ರಿಸಿದ್ದಾರೆ.

ಜೀವನದಲ್ಲಿ ತಮ್ಮ ಮೇಲಾದ ಪ್ರಭಾವ-ಪ್ರೇರಣೆಯನ್ನು ಸ್ವತಃ ಕಟ್ಪಾಡಿಯವರೇ 'ಕಡವು ಮನೆ' ಕೃತಿಯಲ್ಲಿ ಹಾಗೂ ಅಮರೇಶ ನುಗಡೋಣಿ ಅವರು ಸಂಪಾದಿಸಿರುವ 'ನಾನೇಕೆ ಬರೆಯುತ್ತೇನೆ' ಎಂಬ ಕೃತಿಯಲ್ಲಿ ಹೇಳಿಕೊಂಡಿದ್ದಾರೆ. ಸಾಮಾಜಿಕವಾಗಿ, ಧಾರ್ಮಿಕವಾಗಿ ಮತ್ತು ರಾಜಕೀಯವಾಗಿ ಅವರ ಅನುಭವ ಜಗತ್ತು ವಿಸ್ತಾರವಾದುದು. ಕಟ್ಪಾಡಿಯ ಕೋಟೆ ಗ್ರಾಮದಲ್ಲಿ ನಾಲ್ಕುನೂರಕ್ಕೂ ಹೆಚ್ಚು ಮನೆಗಳಿದ್ದು, ಅವುಗಳಲ್ಲಿ ಕಟ್ಪಾಡಿ ಅವರ ಮನೆಯೂ ಒಂದು. ಅಲ್ಲಿ ನೆಲೆಸಿರುವವರಲ್ಲಿ ಅತಿ ಹೆಚ್ಚಾಗಿ ಕೆಳಜಾತಿಯವರೇ ಆಗಿದ್ದಾರೆಂದು ಲೇಖಕರು ಹೇಳುತ್ತಾರೆ. ಹೀಗಾಗಿ ಲೇಖಕರಿಗೆ ಸಾಮಾಜಿಕವಾಗಿ ಬಹುಸಂಖ್ಯಾತರೂ, ಶೋಷಿತರೂ ಆದ ಕೆಳಜಾತಿಗಳ ಜೊತೆ ಹೆಚ್ಚು ಸಮಯ ಕಳೆಯುವ ಸನ್ನಿವೇಶ ಬಂದಿತು. ಹೀಗಾಗಿ ಅವರಿಗೆ ಭಾರತೀಯ ಸಾಮಾಜಿಕ ಜಾತಿ ಪದ್ಧತಿಯ ಏಣಿ-ಶ್ರೇಣಿ ವ್ಯವಸ್ಥೆಯನ್ನು ಅರಿಯಲು ನೆರವಾಗಿದೆ. ಆ ಕಾರಣದಿಂದಲೇ ಅವರ ಕಾದಂಬರಿಗಳಲ್ಲಿ ಕೆಳಸ್ತರದ ಮತ್ತು ಕೆಳಮಧ್ಯಮ ವರ್ಗದ ಕುಟುಂಬಗಳಲ್ಲಿನ ಅನುಭವಗಳು ಪ್ರಧಾನವಾಗಿ ಚಿತ್ರಿತಗೊಂಡಿವೆ. ಭಾರತದಲ್ಲಿ ಕೆಳಮಧ್ಯಮ ವರ್ಗದ ಬಡತನವು ಕಟ್ಪಾಡಿಯವರನ್ನು ಒಳಗೊಂಡಂತೆ ಅನೇಕ ಲೇಖಕರನ್ನು ಕಾದಂಬರಿಕಾರರಾಗುವಲ್ಲಿ ಬಹುಮುಖ್ಯ ಪ್ರೇರಣೆಯಾಗಿದೆ.

ಬಡತನದ ಬೇಗೆಯನ್ನು ಸ್ವತಃ ಅನುಭವಿಸಿದ ಕಟ್ಪಾಡಿ ಅವರು ಆ ಅನುಭವಕ್ಕೆ ಜೀವತುಂಬಿ ಸೃಜನಶೀಲತೆಯಿಂದ ಕೂಡಿದ ಹಲವಾರು ಕತೆಗಳನ್ನು ಬರೆದಿದ್ದಾರೆ. 'ನೋಂಬು', 'ಕಡಲು ತೀರದಲ್ಲಿ ಬೆಂಕಿ ಬಿದ್ದದ್ದು', 'ಕ್ರಿಯೆ' ಮುಂತಾದ ಕತೆಗಳಲ್ಲಿ ಕಿತ್ತುತಿನ್ನುವ ಬಡತನದ ಚಿತ್ರಣವಿದೆ. ಕೆಳವರ್ಗದೊಡನೆ ಹೆಚ್ಚಾಗಿ ಬಳಸಿಕೊಂಡ ಒಡನಾಟ, ಕಟ್ಪಾಡಿಯವರನ್ನು ಒಬ್ಬ ಮಾನವೀಯ ಸಂವೇದನೆಯುಳ್ಳ ಬರಹಗಾರರನ್ನಾಗಿ ರೂಪಿಸಿತು. ಕರಾವಳಿ ಸೀಮೆಯ ಗ್ರಾಮ ಬದುಕಿನ ವಿವಿಧ ಅನುಭವ ಜಗತ್ತು ಅವರ ಕತೆಗಳ ಹಿಂದಿನ ಶಕ್ತಿ ಮತ್ತು ಪ್ರೇರಣೆಯಾಗಿದೆ.

ಕನ್ನಡ ಕಾದಂಬರಿ ಸಾಹಿತ್ಯದಲ್ಲಿ ಮುಸ್ಲಿಂ ಬದುಕಿನ ಪರಿಚಯವಾದದ್ದು ಕಟ್ಪಾಡಿ, ಬೊಳುವಾರು ಮಹಮದ್ ಕುಂಞಿ ಸಾರಾ ಮುಂತಾದವರ ಕತೆ, ಕಾದಂಬರಿಗಳ ಮೂಲಕ ಬಹುಸಂಖ್ಯಾತರ ಯಜಮಾನಿಕೆ ಇರುವ ಸಮಾಜದಲ್ಲಿ ಅಲ್ಪಸಂಖ್ಯಾತರು ಶೋಷಣೆಗೆ ಗುರಿಯಾಗಿರುತ್ತಾರೆ. ಮೂಲಭೂತವಾದಿಗಳು ಮುಸ್ಲಿಂರನ್ನು ಯಾವಾಗಲೂ ಅನುಮಾನದಿಂದ ನೋಡುವ ಸನ್ನಿವೇಶ ಸೃಷ್ಟಿ ಮಾಡುತ್ತಾರೆ. ಇಂತಹ ಸಂದರ್ಭದಲ್ಲಿ ಸಹಜವಾಗಿ ಅಲ್ಪಸಂಖ್ಯಾತರು ಸಮಾನತೆಯನ್ನು, ಪ್ರಜಾಪ್ರಭುತ್ವವನ್ನು ಬಯಸುತ್ತಾರೆ. ಬಹುಸಂಖ್ಯಾತರೊಡನೆ ಹೊಂದಾಣಿಕೆ ಮನೋಭಾವನೆಯನ್ನು ತೋರುತ್ತಾರೆ. ಎಲ್ಲಾ ದೇಶಗಳಲ್ಲಿ ವಾಸಿಸುವ ಧಾರ್ಮಿಕ ಅಲ್ಪಸಂಖ್ಯಾತರ ಸಾಮಾನ್ಯ ಸ್ಥಿತಿ ಇದೇ

ಆಗಿರುತ್ತದೆ. ಕಟ್ಪಾಡಿಯವರ ಮನೆ ಹೆಚ್ಚಿನವರು ಕೆಳಜಾತಿಗಳೆಂದು ಪರಿಗಣಿಸಲ್ಪಟ್ಟ ಹಿಂದೂಗಳು ವಾಸಿಸುತ್ತಿರುವ ಸ್ಥಳದಲ್ಲಿ ಇದ್ದದ್ದರಿಂದ ಹಿಂದೂಗಳೊಡನೆ ಸೌಹಾರ್ದ ಬದುಕನ್ನು ಬದುಕಲು ಅವರಿಗೆ ಕಷ್ಟವಲ್ಲ. ಇಲ್ಲವೇ ಅವರೇ ಸಮಾನತೆಯನ್ನು ಬಯಸುವವರಾಗಿ ಹೊಂದಾಣಿಕೆಯ ಗುಣ ಅವರಿಗೆ ಅನಿವಾರ್ಯ ಆಗಿರಬಹುದು. ಕಟ್ಪಾಡಿ ಅವರಿಗೆ ಈ ಎಲ್ಲಾ ಧಾರ್ಮಿಕ ಅಂಶಗಳು ತೀವ್ರವಾಗಿ ಕಾಡಿವೆ. ಮತ್ತು ಅವು ಅವರ ಕತೆ–ಕಾದಂಬರಿಗಳಲ್ಲಿ ಅಭಿವ್ಯಕ್ತಿಯನ್ನು ಪಡೆದಿವೆ. "ಧರ್ಮ, ಸಮಾಜ, ತನ್ನ ಒಡಲೊಳಗಿನ ಶ್ರೇಷ್ಠತೆಯ ಅಹಂಕಾರವನ್ನು ಯಾರೂ ಪ್ರಶ್ನಿಸದೆ ಸುಮ್ಮನಿದ್ದರೆ ಅಥವಾ ಹೊಗಳಿ ವೈಭವೀಕರಿಸಿದರೆ ಜನ ಪ್ರಸನ್ನರಾಗುತ್ತಾರೆ. ಬಹುಮಾನವನ್ನಿತ್ತು ಸನ್ಮಾನಿಸುತ್ತಾರೆ. ಸಮಾಜ ಒಪ್ಪಿ ಬಾಳುವ ಮೌಲ್ಯಗಳ ಚೌಕಟ್ಟಿನಲ್ಲಿ ಮೀರಿದ ಜೀವನ ಸತ್ಯವನ್ನು ಕಾಣಿಸುವ ಪ್ರಯತ್ನವನ್ನು ಮಾಡುವ ಬರಹಗಾರನನ್ನು ಸಮಾಜ ಸಂಶಯದ ದೃಷ್ಟಿಯಿಂದಲೇ ನೋಡುತ್ತಿದೆ"[೧] ಈ ಬಿಕ್ಕಟ್ಟನ್ನು ಕಟ್ಪಾಡಿ ಅವರು ಅನುಭವಿಸಿದ್ದಾರೆ.

ಮುಸ್ಲಿಂ ಧರ್ಮದಲ್ಲಿನ ಹಲವರ ಜೀವನಕ್ಕೆ ವಿರುದ್ಧವಾದ ಸಿದ್ಧಾಂತಗಳನ್ನು ಖಂಡಿಸಿ ಮೂಲಭೂತವಾದಿಗಳ ಟೀಕೆಗೂ ಅವರು ಗುರಿಯಾಗಿದ್ದಾರೆ. ಅದರಲ್ಲೂ ಮುಸ್ಲಿಂ ಲೋಕದೊಳಗಿರುವ ಮಹಿಳೆಯರ ಮೇಲಿನ ದೌರ್ಜನ್ಯವನ್ನು ತಮ್ಮ ಕಾದಂಬರಿಗಳಲ್ಲಿ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಧರ್ಮದ ಮೂಲಭೂತಿವಾದಿಗಳ ದ್ವೇಷವನ್ನು ಕಟ್ಟಿಕೊಂಡು ಹಲವಾರು ವಿವಾದಗಳಿಗೂ ಒಳಗಾಗಿದ್ದಾರೆ. ಇದು ಒಬ್ಬ ಸೃಜನಶೀಲ ಲೇಖಕರು ಎದುರಿಸಬಹುದಾದ ಸಾಮಾನ್ಯ ಬಿಕ್ಕಟ್ಟು ಭಾರತೀಯ ರಾಜಕೀಯ ಇತಿಹಾಸದಲ್ಲಿ ೬೦–೭೦ರ ದಶಕಗಳು ಪ್ರಗತಿಪರ ಚಿಂತನೆಗಳ ದೃಷ್ಟಿಯಿಂದ ಅನೇಕ ತಲ್ಲಣ ಮತ್ತು ಸಂಚಲನಗಳಿಗೆ ಕಾರಣವಾಗಿದ್ದವು. ದೇಶದಲ್ಲೆಡೆ ತುರ್ತು ಪರಿಸ್ಥಿತಿ ಘೋಷಿತವಾಗಿದ್ದ ಸಂದರ್ಭದಲ್ಲಿ ಕಥೆ, ಕಾದಂಬರಿಕಾರರಾಗಿ ಕಟ್ಪಾಡಿ ಅವರು ಈ ಎಲ್ಲ ಸಂಗತಿಗಳಿಗೂ ಎದೆಕೊಡಬೇಕಾಗಿತ್ತು. ಅವರು ಎಲ್ಲಾ ಧರ್ಮಗಳ ಒಳಗಿರುವ ಕೋಮುವಾದ ಮತ್ತು ಮೂಲಭೂತವಾದಗಳನ್ನು ವಿರೋಧಿಸುತ್ತಲೇ ಮನುಷ್ಯನ ಒಳಗಿರುವ ಒಳ್ಳೆಯತನಗಳ ಮಾನವೀಯ ಮನಸ್ಸುಗಳನ್ನು ಅಭುವ್ಯಕ್ತಿಸುವ ಕತೆಗಳನ್ನು ಬರೆದರು. ಅಲ್ಲದೆ ಮುಸ್ಲಿಂ ಸಮುದಾಯದ ಆಚರಣೆಯಲ್ಲಿರುವ ಜೀವ ವಿರೋಧಿ ಅಂಶಗಳನ್ನು ಕಾದಂಬರಿಗಳಲ್ಲಿ ಬಯಲುಗೊಳಿಸಿದರು. ಮುಸ್ಲಿಂರನ್ನೂ ಒಳಗೊಂಡಂತೆ ಎಲ್ಲಾ ಸಮುದಾಯಗಳ ಬದುಕಿನ ಅನ್ವೇಷಣೆಯನ್ನು ಪರಿಣಾಮಕಾರಿಯಾಗಿ ಚಿತ್ರಿಸಿದರು.

ಕಟ್ಪಾಡಿಯವರು ಸಾಹಿತ್ಯ ಕ್ಷೇತ್ರಕ್ಕೆ ತಮ್ಮದೇ ಆದಂತಹ ವಿಶಿಷ್ಟ ಕೊಡುಗೆಯನ್ನು ನೀಡಿದ್ದಾರೆ. ಅವರ ಪ್ರಮುಖ ಕಾದಂಬರಿಗಳೆಂದರೆ ಸರಕುಗಳು (೧೯೮೯), ಹಾಗೂ ಕಚ್ಚಾದ (೧೯೯೭).

ಕಥಾಸಂಕಲನಗಳೆಂದರೆ ಗೋರಿಕಟ್ಟಿಕೊಂಡವರು (೧೯೮೧), ನೋಂಬು (೧೯೮೮), ದಜ್ಜಾಲ (೨೦೦೧), ಆತ್ತರ್ ಹಾಜಿಕಾ ಮತ್ತು ಇತರ ಕಥೆಗಳು (೨೦೦೭), ಪಚ್ಚ ಕುದುರೆ (೨೦೧೨), ಕಡವು ಮನೆ ನೀಳ್ಗಥೆಗಳು (೨೦೧೨). ಅವರ ಇತರ ಕೃತಿಗಳು ಹೀಗಿವೆ. ಕೇರಳದಲ್ಲಿ ಹದಿನೈದು ದಿನಗಳು (೧೯೮೯), ರಾಷ್ಟ್ರೀಯತೆ ಮತ್ತು ಮುಸ್ಲಿಂ ಮಹಿಳೆಯರು(೧೯೯೩), ಕಯ್ಯೂರಿನ ರೈತವೀರರು (೧೯೯೨), ಸೂಫಿ-ಸಂತರು (೨೦೧೦), ಸೂಫಿ ಮಹಿಳೆಯರು (೨೦೧೦). ಕಟ್ಪಾಡಿಯವರು ಮಾಡಿರುವ ಅನುವಾದಗಳೆಂದರೆ ಬೇರೂಲೆನಿಂದ ಜರೂಸಲೇಮಿಗೆ (೨೦೧೦), ಸಾದತ್ ಹಸನ್ ಮಂಟೋರವರ 'ದೇಶವಿಭಜನೆಯ ಕಥೆಗಳು' (೨೦೧೦) ಹಾಗೂ ಇಸ್ಮತ್ ಚುಗ್ತಾಯಿ.

ಇವರ ಕಾದಂಬರಿಗಳು ಮಲಯಾಳಂ, ಮರಾಠಿಗೆ ಅನುವಾದಗೊಂಡಿವೆ. 'ಕಚ್ಚಾದ' ಕಾದಂಬರಿ ಮಲಯಾಳಂ ಭಾಷೆಗೆ ಅನುವಾದಗೊಂಡಿದೆ. (ಕದೀಸುವಿಂಡೆ ಲೋಗಂ, ಮಾತೃಭೂಮಿ ಪ್ರಕಾಶನ) 'ಸರಕುಗಳು' ಕಾದಂಬರಿ ಮರಾಠಿಗೆ ಅನುವಾದಗೊಂಡಿದೆ. ಇವರ ಕತೆಗಳು ಹಿಂದಿ, ಗುಜರಾತಿ, ಮರಾಠಿ, ತಮಿಳು, ಬಂಗಾಳಿ, ಮಲಯಾಳಂ, ಇಂಗ್ಲೀಷ್, ಉರ್ದು, ಕೊಂಕಣಿ, ತೆಲುಗು ಭಾಷೆಗಳಿಗೆ ಅನುವಾದಗೊಂಡಿವೆ.

**ಕಟ್ಪಾಡಿಯವರಿಗೆ ಸಂದ ಪ್ರಶಸ್ತಿಗಳು :**

ಕಥಾ ಪ್ರಶಸ್ತಿ 'ನೋಂಬು (೧೯೯೧), ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 'ದಜ್ಜಾಲ' (೨೦೦೧), ಕನ್ನಡ ರಾಜ್ಯೋತ್ಸವಪ್ರಶಸ್ತಿ (೨೦೦೧), ತುಳುಶ್ರೀ ಪ್ರಶಸ್ತಿ (೨೦೦೪), ಶಿವಮೊಗ್ಗಾ ಕರ್ನಾಟಕ ಸಂಘದ ಲಂಕೇಶ ಪ್ರಶಸ್ತಿ (೨೦೧೧), ಚಿಕ್ಕಮಂಗಳೂರಿನಲ್ಲಿ ೨೦೦೭ರಲ್ಲಿ ನಡೆದ ೪ನೆಯ ಅಖಿಲ ಭಾರತ ಬ್ಯಾರಿಭಾಷಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಮನ್ನಣೆಗೆ ಶ್ರೀಯುತರು ಪಾತ್ರರಾಗಿದ್ದಾರೆ.

**ಅಡಿ ಟಿಪ್ಪಣಿ :**

೧. ಅಮರೇಶ ನುಗಡೋಣಿ (ಸಂ), ನಾನೇಕೆ ಬರೆಯುತ್ತೇನೆ, ಪು-೧೩೪

## ಅಧ್ಯಾಯ : ಮೂರು

# ಮುಸ್ಲಿಂ ಸಮಾಜ ಮತ್ತು ಸಾಹಿತ್ಯ

ಸಾಮಾನ್ಯವಾಗಿ ಸಮಾಜ ಮತ್ತು ಸಾಹಿತ್ಯ ಪರಸ್ಪರ ಸಂಬಂಧವನ್ನು ಹೊಂದಿವೆ. ಸಮಾಜದಿಂದಲೇ ಸಾಹಿತ್ಯದ ಉದಯವಾಗುತ್ತದೆ. ಇಷ್ಟೇಯಾಕೆ ಭಾಷೆಯ ಉದಯವೂ ಕೂಡ ಸಮಾಜದಿಂದಲೇ, ಭಾಷೆಯ ಉದಯವೆಂದರೆ ಸಾಹಿತ್ಯದ ಉದಯವೇ ಸರಿ "ರಸಾನುಭವದ ಸುಂದರವಾದ ಅಭಿವ್ಯಕ್ತಿಯೇ ಸಾಹಿತ್ಯ"[೧] ಲೇಖಕ ಈ ಸಮಾಜದೊಳಗಿನ ಒಬ್ಬ ವ್ಯಕ್ತಿಯೇ ಆಗಿದ್ದಾನೆ. ಅವನು ಕೂಡಾ ಸಾಮಾನ್ಯರಂತೆ ನಿತ್ಯ ಬದುಕು ನಡೆಸುತ್ತಿರುತ್ತಾನೆ. ಈ ಸಮಾಜದ ನಡವಳಿಕೆಗೆ ಪ್ರತಿಕ್ಷಣ ಸ್ಪಂದಿಸುತ್ತಾನೆ. ಅವನಲ್ಲಿಯ ವಿಶೇಷವೆಂದರೆ ತಾನು ಪಡೆದ ಅನುಭವಕ್ಕೆ ಮಾತು ಕೊಡುವುದು ಅಂದರೆ ಸುಂದರವಾದ ಅಭಿವ್ಯಕ್ತಿಯನ್ನು ಕೊಡುವುದು. ಈ ಅಭಿವ್ಯಕ್ತಿಯಲ್ಲಿ ಬಳಸುವ ಭಾಷೆಯೂ ಸಮಾಜದ ಕೊಡುಗೆಯೇ ಆಗಿದೆ. ಅನುಭವ ಹಾಗೂ ಅಭಿವ್ಯಕ್ತಿ ಅಂದರೆ ಭಾವ ಮತ್ತು ಭಾಷೆ. ಇವೆರಡು ದೊರೆಯುವುದು ಸಮಾಜದಿಂದಲೇ ಆಗಿರುವಾಗ ಸಾಹಿತ್ಯಕ್ಕೂ, ಸಮಾಜಕ್ಕೂ ಇರುವ ಸಂಬಂಧವನ್ನು ಬಿಡಿಸಿ ಹೇಳುವ ಅಗತ್ಯ ಬರುವುದಿಲ್ಲ.

ಇತ್ತೀಚಿನ ಈ ಎರಡು ದಶಕಗಳಲ್ಲಿ ಕನ್ನಡ ಸಾಹಿತ್ಯ ತನಗೆ ಅಪರಿಚಿತವಾಗಿದ್ದ ಕೆಲವು ಹೊಸ ಆಯಾಮಗಳನ್ನು ಪಡೆದುಕೊಂಡಿದೆ. ದಲಿತ ಸಂವೇದನೆಗಳು, ಮುಸ್ಲಿಂ ಸಂವೇದನೆಗಳು, ಮಹಿಳಾ ಸಂವೇದನೆಗಳು ಮತ್ತು ಶೂದ್ರ ಸಂವೇದನೆಗಳು ಹೆಚ್ಚು ಅಧಿಕೃತವಾಗಿ ಅರ್ಥಪೂರ್ಣವಾಗಿ ಇತ್ತೀಚಿನ ದಲಿತ ಬಂಡಾಯ ಸಾಹಿತ್ಯದಲ್ಲಿ ದಾಖಲಾಗಿವೆ. ಒಂದು ಸಂವೇದನೆ ಸಾಹಿತ್ಯದಲ್ಲಿ ಅಧಿಕೃತವಾಗುವುದು, ಅರ್ಥಪೂರ್ಣವಾಗುವುದು. ಅದರ ಒಳನೋಟಗಳ ಸೂಕ್ಷ್ಮತೆಯಿಂದ ತನ್ನೊಳಗೆ ತೀವ್ರವಾಗಿ ತುಡಿಯುವ ನೇರ ಅನುಭವದಿಂದ ಮಾತ್ರ ಸಾಧ್ಯ. ಹಿಂದಿನ ಸಾಹಿತ್ಯದಲ್ಲಿ

ದಲಿತರ ಬಗೆಗೆ, ಮುಸ್ಲಿಂರ ಬಗೆಗೆ, ಮಹಿಳೆಯರ ಬಗೆಗೆ, ಶೂದ್ರರ ಬಗೆಗೆ ಪ್ರಸ್ತಾಪ ಬಂದಿದ್ದವು. ಅಲ್ಲಲ್ಲಿ ಕೆಲವು ಪಾತ್ರಗಳು ನಿಂತುಕೊಂಡಿದ್ದರೂ ಅದು ಅಧಿಕೃತವಾಗಿ ಈ ಸಂವೇದನೆಯನ್ನು ತನ್ನೊಡಲೊಳಗೆ ತುಂಬಿಕೊಂಡಿರಲಿಲ್ಲ. ಹಾಗೆ ಪ್ರಜ್ಞಾಪೂರ್ವಕವಾಗಿ ಒತ್ತಾಯದಿಂದ ತೇಲಿಬಂದ ಈ ಪಾತ್ರಗಳಿಗೆ ಒಳಮುಖಗಳೇ ಇರಲಿಲ್ಲ. ಸಾಹಿತ್ಯವನ್ನು ಸಾಂಸ್ಕೃತಿಕ ನೆಲೆಯಿಂದ ನೋಡುವ ಇತ್ತೀಚಿನ ಈ ಸಂದರ್ಭದಲ್ಲಿ ಸಂವೇದನೆಗಳಿಗೆ ಸಂಬಂಧಿಸಿದ ಈ ಮಾತುಗಳು ತೀರಾ ಮುಖ್ಯವಾಗುತ್ತವೆ. ಕನ್ನಡ ಸಾಹಿತ್ಯದಲ್ಲಿ ಮುಸ್ಲಿಂ ಸಮಾಜ ಮತ್ತು ಸಾಹಿತ್ಯ ಎಂದಾಕ್ಷಣ ಕಾವ್ಯ, ನಾಟಕ, ಕಥೆ, ಕಾದಂಬರಿಯಂತಹ ಸೃಜನಶೀಲ ರೂಪಗಳು ನೆನಪಿಗೆ ಬರುತ್ತವೆ. ಕಥೆ–ಕಾದಂಬರಿ ರೂಪಗಳನ್ನೊಳಗೊಂಡ ಕಥನ ಸಾಹಿತ್ಯದಲ್ಲಿ ಇಂತಹ ವಿಷಯಗಳ ಚರ್ಚೆಗೆ ವಿಶಾಲವಾದ ತಳಹದಿಯಿದೆ. ಒಂದು ಜನಾಂಗದ ಸಾಂಸ್ಕೃತಿಕ ಅಧ್ಯಯನಕ್ಕಾಗಲಿ ಅಥವಾ ಒಂದು ಸಂವೇದನೆಯ ವಿವರಗಳಿಗಾಗಲಿ, ಪೂರ್ಣ ದಾಖಲೆಗಳಿಗಾಗಲಿ ಕಥನ ಸಾಹಿತ್ಯ, ಕಾವ್ಯ, ನಾಟಕಗಳಿಗಿಂತ ಹೆಚ್ಚು ಸಾಧ್ಯತೆಗಳನ್ನೊಳಗೊಂಡಿರುತ್ತದೆ.

ಮುಸ್ಲಿಂ ಸಮಾಜ ಮತ್ತು ಸಾಹಿತ್ಯದ ಮುಸ್ಲಿಮೇತರ ಲೇಖಕರ ಕೃತಿಗಳಲ್ಲಿ ಅಲ್ಲಲ್ಲಿ ಉದಾಹರಣೆಗಾಗಿ ಬಂದಿವೆಯೇ ಹೊರತು ಅವು ಆ ಸಂಸ್ಕೃತಿಯ ಪ್ರತಿನಿಧಿಯಾಗಿ, ಅಲ್ಲಿಯ ಒಳತುಡಿತಗಳಾಗಿ ಬಂದಿಲ್ಲ. ಆದುದರಿಂದ ಮುಸ್ಲಿಂ ಜನಾಂಗದಿಂದ ಬೆಳೆದುಬಂದು, ಅಲ್ಲಿಯ ಒಳಹೊರವುಗಳನ್ನು ಅನುಭವಿಸಿ ತನ್ನ ಸಂಸ್ಕೃತಿಯನ್ನು ಪ್ರಶ್ನಿಸುತ್ತ, ಅಲ್ಲಿಯ ಮಿತಿಗಳನ್ನು ಮೀರುತ್ತ ಜನಪರ ಸಂಸ್ಕೃತಿಗಾಗಿ ಹಾತೊರೆಯುವ ಲೇಖಕರಲ್ಲಿ ಮಾತ್ರ ಅದೇರೀತಿ "ಕುವೆಂಪು ಒಡ್ಡೇರದಿಣ್ಣೆ ಮೇಲೆ ನಿಂತು ದಲಿತರ ಬದುಕನ್ನು ನೋಡಲು ಸಾಧ್ಯವೇ ಹೊರತು ಹೊಲೆಯರ ಗುಡಿಸಲಿನಲ್ಲಿ ಕುಳಿತು ನೋಡಲಾರರು"[೨] ಎನ್ನುವ ಬಿ. ಕೃಷ್ಣಪ್ಪನವರ ಮಾತಿನಲ್ಲಿ ದಲಿತರ ಜೀವನ ಚಿತ್ರಣವನ್ನು ಚಿತ್ರಿಸಲು ಲೇಖಕನೂ ಸಹ ದಲಿತನಾಗಿ ಅನುಭವವನ್ನು ಪಡೆಯಲೇಬೇಕು ಎಂದು ಹೇಳುತ್ತಾರೆ. ಮುಸ್ಲಿಂ ಸಮಾಜ ಮತ್ತು ಸಾಹಿತ್ಯ ನಿಜರೂಪದಲ್ಲಿ ಕಾಣಿಸಿದೆ. ಹೀಗಾಗಿ ಕನ್ನಡ ಸಾಹಿತ್ಯದಲ್ಲಿ ಮುಸ್ಲಿಂ ಸಮಾಜ ಮತ್ತು ಸಾಹಿತ್ಯ ಆಥೆಂಟಿಸಿಟಿ ಪಡೆದುಕೊಂಡಿದ್ದು ದಲಿತ ಬಂಡಾಯ ಸಾಹಿತ್ಯ ಸಂದರ್ಭದಲ್ಲಿ ಬೆಳೆದುಬಂದ ಪ್ರಗತಿಪರ ಮುಸ್ಲಿಂ ಲೇಖಕರಿಂದ ಎಂದು ಸ್ಪಷ್ಟವಾಗಿ ಹೇಳಬಹುದು.

ಕನ್ನಡ ಸಾಹಿತ್ಯದಲ್ಲಿ ಮುಸ್ಲಿಂ ಬರಹಗಾರರು ಸಾಹಿತ್ಯ ರಚನೆಗೆ ತೊಡಗಿದ್ದು ೧೮ನೆಯ ಶತಮಾನದ ಆರಂಭ ಕಾಲದಿಂದ ಕಾಣಬಹುದಾಗಿದೆ. ಇವರ ಮಾತೃಭಾಷೆ ಉರ್ದು, ಮಲೆಯಾಳಂ ಮುಂತಾದ ಭಾಷೆಯಾದರೂ ತಾವು ಬರೆಯುತ್ತಿರುವ ನಾಡಿನ ಪ್ರಾದೇಶಿಕ ಭಾಷೆಯಾದ ಕನ್ನಡದಲ್ಲಿ ಕೃತಿಗಳನ್ನು ರಚಿಸಿದರು. ಇದು ಇವರ ಗಮನಾರ್ಹ ಕೊಡುಗೆ ಎನ್ನಬಹುದು. ಈ

ಪರಂಪರೆ ಕರ್ನಾಟಕದಲ್ಲಿ ಶಿಶುನಾಳ ಶರೀಫ್ ಸಾಹೇಬರಿಂದ ಆರಂಭವಾಗುತ್ತದೆ. ಮುಸ್ಲಿಂ ಕವಿಗಳ ಪರಂಪರೆ ಆಧ್ಯಾತ್ಮ ಚಿಂತನೆಯ ಮೂಲಕ ಕನ್ನಡ ಸಾಹಿತ್ಯ ಬರವಣಿಗೆಯಲ್ಲಿ ತೊಡಗಿದ್ದು; ಶರೀಫರು ತತ್ತ್ವಪದಗಳ ಮೂಲಕ ಎನ್ನಬಹುದು. ೧೮೧೯ಜುಲೈ ೩ರಂದು ಜನಿಸಿದ ಇವರು ಜುಲೈ ೩ ೧೮೮೯ರವರೆಗೆ ಬದುಕಿದ ಮಹಾ ಸಂತರಾಗಿದ್ದಾರೆ. ಬ್ರಾಹ್ಮಣರೆನಿಸಿದ ಗೋವಿಂದ ಭಟ್ಟರು ಜಾತಿ, ಮತ, ಬಣ್ಣ, ವೇಷಗಳನ್ನು ಎಣಿಸದೆ ಶರೀಫರಿಗೆ ಆಧ್ಯಾತ್ಮಿಕ ದೀಕ್ಷೆಯನ್ನು ನೀಡಿದರು. ಅಂತೆಯೇ ಶರೀಫರು 'ರಾಮರಹೀಂ'ರೆಂಬ ಪರಿಕಲ್ಪನೆಯಲ್ಲಿ ಹಿಂದೂ–ಮುಸ್ಲಿಂ ಸಾಮರಸ್ಯದ ಸಂಕೇತವಾಗಿ ನಿಲ್ಲುತ್ತಾರೆ. ಶರಣರು, ದಾಸರು ನುಡಿದಿರುವಂತೆ ಶರೀಫರು ಭಕ್ತಿಪಂಥದಲ್ಲಿ ತತ್ತ್ವಪದಕಾರರಾಗಿ ಹಲವಾರು ತತ್ವಪದಗಳನ್ನು ರಚಿಸಿರುವರು. ಇವರ ಚಿಂತನೆಗಳು ದೇಶೀಯ ಮೂಲವಾದವುಗಳು. ಜಾನಪದ ಸೊಗಡನ್ನು ಅಂಟಿಕೊಂಡ ಇವರ ತತ್ತ್ವಪದಗಳು ಜನಸಾಮಾನ್ಯರ ಎದೆಯನ್ನು ಮುಟ್ಟಿ, ಮನ ಮತ್ತು ಹೃದಯಗಳನ್ನು ಶುದ್ಧಿಗೊಳಿಸುವಂತಹುಗಳಾಗಿವೆ. ಸಮಾಜದಲ್ಲಿ ಸಂದರ್ಭ, ಸನ್ನಿವೇಶ, ಪ್ರಸಂಗಗಳಿಗನುಸಾರವಾಗಿ ತಾವು ಪ್ರತ್ಯಕ್ಷವಾಗಿ ಕಂಡ ಘಟನೆಗಳನ್ನು ತಾತ್ವಿಕವಾಗಿ ವಿಶ್ಲೇಷಿಸುತ್ತಾರೆ. 'ಜನವಾಣಿಯೇ ಕವಿವಾಣಿ'ಯಾಗುತ್ತದೆ ಎಂಬುದಕ್ಕೆ ಶರೀಫರೇ ಪ್ರತ್ಯಕ್ಷ ಸಾಕ್ಷಿ.

ಶರೀಫರು ತಮ್ಮ ತತ್ತ್ವಪದಗಳಲ್ಲಿ ಪ್ರತಿಮೆ ಮತ್ತು ಸಂಕೇತಗಳನ್ನು ತುಂಬಾ ಪರಿಣಾಮಕಾರಿಯಾಗಿ ಬಳಸುತ್ತಾರೆ. ಪುರಾಣ, ಸಮಾಜ ಮೊದಲಾದ ಮೌಲ್ಯಗಳಿಂದ ತತ್ತ್ವಗಳನ್ನು ಸಮರ್ಥಿಸಿಕೊಳ್ಳುತ್ತಾರೆ. 'ಹುಚ್ಚುನಾಯಿ ಬಂದು ಕಡಿಯುತಿಹುದು ತಂಗಿ, ಎಚ್ಚರದಲಿ ದಾರಿ ಹಿಡಿದು ನಡಿ' ಎಂಬ ಜಾನಪದೀಯ ಶೈಲಿಯಲ್ಲಿ ಕಾಮ, ಕ್ರೋದ, ಮದ, ಮತ್ಸರಗಳು ನಮ್ಮನ್ನು ದಾರಿ ತಪ್ಪಿಸುತ್ತವೆಂಬ ಅಂಶವನ್ನು 'ಹುಚ್ಚುನಾಯಿ' ಎಂಬ ಸಂಕೇತದಿಂದ ಪ್ರತಿಪಾದಿಸುತ್ತಾರೆ. ಇಂತಹ ಹಲವಾರು ಅವರ ತತ್ತ್ವಪದಗಳು ಜನನಾಡಿಯನ್ನು ಮಿಡಿದಿವೆ. ಸಮಾಜ. ವಿಮರ್ಶೆ, ಸಾಮಾಜಿಕ ಚಿಂತನೆ, ಮಾನವೀಯ ಮೌಲ್ಯಗಳ ಪ್ರತಿಪಾದಕರಾಗಿದ್ದಾರೆ.

ಹೀಗೆ ಶರೀಫ ಸಾಹೇಬರಿಂದ ಆರಂಭವಾದ ಮುಸ್ಲಿಂ ಲೇಖಕರ ಪರಂಪರೆಯು ಆಧ್ಯಾತ್ಮಿಕವಾಗಿ ಮುಂದುವರೆದು ಬಂದುದು ಕಂಡುಬರುತ್ತದೆ. "ಕನ್ನಡ ಸಾಹಿತ್ಯಕ್ಕೆ ಮುಸ್ಲಿಂ ತತ್ತ್ವಪದಕಾರರ ಸಾಹಿತ್ಯ ಸೇವೆಯು ಅತ್ಯಮೂಲ್ಯವಾಗಿದೆ. ೧೮ನೆಯ ಶತಮಾನದಲ್ಲಿ ಬಾಳಿದ ಕಲಬುರ್ಗಿ ಜಿಲ್ಲೆಯ ಜೇವರ್ಗಿ ತಾಲೂಕಿನ ಕಡಕೋಳ ಗ್ರಾಮದ ತತ್ತ್ವಪದಕಾರರಾದ ಮಡಿವಾಳಪ್ಪನವರ ಶಿಷ್ಯರೆಲ್ಲರೂ ಮುಸ್ಲಿಂ ತತ್ತ್ವಕವಿಗಳಾಗಿದ್ದಾರೆ. ಜೇವರ್ಗಿ ತಾಲೂಕಿನ ಚೆನ್ನೂರು ಗ್ರಾಮದವರಾದ ಚೆನ್ನೂರು ಜಮಾಲ ಸಾಹೇಬರು 'ಸಬ್‌ಕಹತೇ ಈಶ್ವರ–ಅಲ್ಲ ಇದರ ಬೇಧ ಯಾರಿಗೂ

ತಿಳಿದಿಲ್ಲ'ಎಂದು ಈಶ್ವರ-ಅಲ್ಲಾಹರನ್ನು ಸರಿಸಮನಾಗಿ ಕಂಡು ಅನುಭಾವಿ ಕವಿಯಾಗಿದ್ದಾರೆ"[೩] ಈ ಮುಸ್ಲಿಂ ತತ್ತ್ವಪದಕಾರರು ಸಾಮರಸ್ಯದ ಸಂಕೇತವಾಗಿ, ಧರ್ಮತತ್ತ್ವಗಳನ್ನು ಬೋಧಿಸುತ್ತ ಅಮೂಲ್ಯ ಕೊಡುಗೆಗಳನ್ನು ನೀಡಿದ್ದಾರೆ.

ಈ ಕವಿಗಳೆಲ್ಲಾ ಬರೆದ ಆಧ್ಯಾತ್ಮಿಕ ತತ್ತ್ವಪದಗಳಲ್ಲಿ ಮುಸ್ಲಿಂ ಸಮಾಜ ಸಂವೇದನೆಗಳು ಅಷ್ಟಾಗಿ ಕಂಡುಬರುವುದಿಲ್ಲ. ಅದು ನಿಜವಾದ ಸಂವೇದನೆಗಳ ಅರ್ಥದಲ್ಲಿ ಪ್ರಾರಂಭವಾಗುವುದು ದಲಿತ ಬಂಡಾಯದ ಸಂದರ್ಭದಲ್ಲೆಂದು ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಶರೀಫರು ಮುಸ್ಲಿಂ ಜನಾಂಗದಲ್ಲಿ ಹುಟ್ಟಿಬಂದರೂ ಅವರ ಗೀತೆಗಳಲ್ಲಿ ಮುಸ್ಲಿಂ ಅಸ್ಮಿತೆಯಂತಹ ವಿಶಿಷ್ಟ ಆ ಸಂವೇದನೆಗಳ ಅಧಿಕೃತ ದಾಖಲೆಗಳಿಲ್ಲ. ಅದೇರೀತಿ ಎಂ. ಅಕಬರಅಲಿ, ಕೆ.ಎಸ್. ನಿಸಾರ್ ಅಹಮದ್‌ರಂತಹ ಕವಿಗಳಲ್ಲೂ ನಾವು ಅಂತಹ ಸಂವೇದನೆಗಳನ್ನು ಕಾಣಲು ಸಾಧ್ಯವಿಲ್ಲ.

ಕೆ.ಎಸ್. ನಿಸಾರ್ ಅಹಮದ್‌ರವರು ಬಾಲ್ಯದಲ್ಲಿ ಅಂದರೆ ೧೯೪೯ರ ಸುಮಾರಿಗೆ ಕವನ ಬರೆದು ತಮ್ಮ ಕಾವ್ಯ ಶಕ್ತಿಯನ್ನು ಪ್ರದರ್ಶಿಸಿದ ಇವರು 'ನಿತ್ಯೋತ್ಸವ ತಾಯಿ ನಿತ್ಯೋತ್ಸವ' ಎಂಬ ಪ್ರಸಿದ್ಧ ಗೀತೆಯಿಂದ ಜನನಾಡಿಯಲ್ಲಿ ನಿಂದವರಾಗಿದ್ದಾರೆ. ಮನಸ್ಸು ಗಾಂಧಿ ಬಜಾರು, ನೆನದವರ ಮನದಲ್ಲಿ, ಸುಮೂಹರ್ತ, ಸಂಜೆ ಐದರ ಮಳೆ, ಸಾನೆಂಬ ಪರಕೀಯ, ನಿತ್ಯೋತ್ಸವ, ಅನಾಮಿಕ ಆಂಗ್ಲರು, ಬಹಿರಂತರ, ಅಮ್ಮ-ಆಚಾರ-ನಾನು ಎಂಬ ಮುಂತಾದ ಹಲವಾರು ಕವನಗಳನ್ನು ರಚಿಸಿದ್ದಾರೆ.

ಕಥನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಮುಸ್ಲಿಂ ಲೇಖಕರಲ್ಲಿ ಎರಡು ಭಾಗಗಳನ್ನಾಗಿ ವಿಂಗಡಿಸಬಹುದಾಗಿದೆ. ೧೯೪೦-೧೯೭೫ರವರೆಗೆ ಒಂದು ಹಂತವನ್ನು ೧೯೭೫ರಿಂದ ಇಲ್ಲಿಯವರೆಗೆ ಮತ್ತೊಂದು ಹಂತವನ್ನು ಗುರುತಿಸಿಕೊಳ್ಳಬಹುದಾಗಿದೆ. ಮೊದಲ ಹಂತದಲ್ಲಿ ಬರುವ ಎಂ. ಜೀವನ, ಎಂ. ಅಕಬರಅಲಿ, ಎಂ. ದಸ್ತಗೀರ್, ಅಬ್ದುಲ್ ಮಜೀದಖಾನ್ ಈ ಮೊದಲಾದ ಲೇಖಕರಲ್ಲಿ ವಿಶಿಷ್ಟವಾದ ಮುಸ್ಲಿಂ ಸಂವೇದನೆಗಳು ಅಧಿಕೃತವಾಗಿ ದಾಖಲಾಗಿಲ್ಲ. ಇವರ ಕೃತಿಗಳಿಗೂ ಕನ್ನಡದ ಇತರ ಕೃತಿಗಳೀಗೂ ವಸ್ತು ಆಶಯಗಳ ದೃಷ್ಟಿಯಿಂದ ಅಂತಹ ವ್ಯತ್ಯಾಸ ಕಾಣುವುದಿಲ್ಲ. ಅದೇರೀತಿ ಅಬ್ದುಲ್ ಮಜೀದ್‌ಖಾನ್ ಅವರ 'ಅಂಧೇರಿನಗರ' ಮತ್ತು 'ದಿಗಂತ' ಕಾದಂಬರಿಗಳಲ್ಲಾಗಲಿ ಆಸಿಫ್‌ಅಲಿ ಮುಜಾವರ ಅವರ 'ಸಾವಿನಸುಳಿ' ಮತ್ತು ದಸ್ತಗೀರ್ ಅವರ 'ಹುಲ್ಲುಗಾವಲು' ಕಾದಂಬರಿಗಳಲ್ಲಾಗಲಿ ಮುಸ್ಲಿಂ ಸಂವೇದನೆಗಳ ಆಂಥೆಟಿಸಿಟಿ ಕಾಣುವುದಿಲ್ಲ. ಇದೇರೀತಿ ಮುಮ್ತಾಜ್‌ಬೇಗಂ ಅವರ 'ಪರದೇಶಿ' ಕಾದಂಬರಿಯಲ್ಲೂ ಮುಸ್ಲಿಂ ಜನಾಂಗದ ಬದುಕು ಅನನ್ಯವೆನಿಸುವುದಿಲ್ಲ.

ಕನ್ನಡದಲ್ಲಿ ಮುಸ್ಲಿಂ ಸಂವೇದನೆಗಳ ಅಧಿಕೃತ ದಾಖಲೆ ಬೋಳವಾರು ಮಹಮದ್ ಕುಞ್ ಅವರಿಂದ ಪ್ರಾರಂಭವಾಗುತ್ತದೆ. ಅದೇರೀತಿ ಮುಮ್ತಾಜ್ ಪ್ರಥಮ ಮುಸ್ಲಿಂ ಲೇಖಕಿಯಾಗಿ ಕಾಣುತ್ತಾರೆ. ಹೀಗೆ ಈ ದಲಿತ ಬಂಡಾಯ ಸಾಹಿತ್ಯ ಸಂದರ್ಭದಲ್ಲಿ ಬರೆಯುತ್ತಿರುವ ಬೋಳವಾರು ಮಹಮದ್ ಕುಂಞ್, ಫಕೀರ್ ಮುಹಮದ್ ಕಟ್ಪಾಡಿ, ಅಬ್ದುಲ್ ರಶೀದ್, ಸಾರಾ ಅಬೂಬಕ್ಕರ್, ಬಾನು ಮುಷ್ತಾಕ ಇಂಥವರ ಕೃತಿಗಳಲ್ಲಿ ಮಾತ್ರ ಮುಸ್ಲಿಂ ಸಂಬೇದನೆಗಳು ಅಧಿಕೃತವಾಗಿವೆ. ಮುಸ್ಲಿಂ ಸಮಾಜ ಮತ್ತು ಸಾಹಿತ್ಯದಲ್ಲಿ ಸಮಾಜದ ಸ್ವರೂಪ ನಿಷ್ಚಳವಾಗಿ ಮೂಡಿಬಂದಿದೆ.

ಅಬ್ದುಲ್ ಮಜೀದ್‌ಖಾನ್ ಮತ್ತು ಮುಮ್ತಾಜ್‌ಬೇಗಂ ಇವರು ಮುಸ್ಲಿಂ ಬದುಕಿನ ಆವರಣದಲ್ಲಿಯೇ ತಮ್ಮ ಕೃತಿಗಳನ್ನು ರಚಿಸಿದ್ದರೂ ಕೂಡ ಮುಸ್ಲಿಂ ಸಂಸ್ಕೃತಿಯ ಒಳನೋಟಗಳ ದೃಷ್ಟಿಯಿಂದ ಆ ಸಾಂಸ್ಕೃತಿಕ ಪರಂಪರೆಯ ಚಾರಿತ್ರಿಕ ಸತ್ಯಗಳಿಂದ ಅಥೆಂಟಿಕ್ ಆಗಿ ಕಾಣಿಸುವುದಿಲ್ಲ. ಆದರೆ ಬೋಳವಾರು, ಕಟ್ಪಾಡಿ, ರಶೀದ್, ಸಾರಾ, ಬಾನು ಈ ಮುಂತಾದ ಲೇಖಕರಲ್ಲಿ ಮುಸ್ಲಿಂ ಸಂವೇದನೆಗಳು ದಟ್ಟವಾಗಿವೆ. ಮುಸ್ಲಿಂ ಮಹಿಳಾ ಪಾತ್ರಗಳು ನೈಜವಾಗಿ ಮೂಡಿಬಂದಿವೆ. ಮುಸ್ಲಿಂಮೇತರ ಲೇಖಕರ ಕೃತಿಗಳಲ್ಲಿ ಅಲ್ಲಲ್ಲಿ ಮುಸ್ಲಿಂ ಪಾತ್ರಗಳು ಬಂದಿದ್ದರೂ ಅವು ಆ ಸಾಂಸ್ಕೃತಿಕ ಪರಂಪರೆಯ ಚಾರಿತ್ರಿಕ ದೃಷ್ಟಿಯಿಂದ ಅನನ್ಯವೆನಿಸುವುದಿಲ್ಲ. ಮುಸ್ಲಿಂ ಮಹಿಳೆ ಕಿವಿಯಲ್ಲಿ ಹಾಕಿಕೊಳ್ಳುವ 'ಅಲಿಖತ್' ಹಿಂದೂ ಮಹಿಳೆ ಕೊರಳಲ್ಲಿ ಧರಿಸುವ 'ಮಂಗಲಸೂತ್ರ'ದಷ್ಟೇ ಮುಖ್ಯ ಎಂಬ ಸಂಗತಿ. ಮುಸ್ಲಿಂಮೇತರ ಲೇಖಕರಿಗೆ ತಟ್ಟನೇ ಹೊಳೆಯುವುದಿಲ್ಲ. ಅದು ಅಸಾಧ್ಯ. ಕುಂ. ವೀರಭದ್ರಪ್ಪನವರು 'ಕೆಂಡದ ಮಳೆ' ನೀಳ್ಗತೆಯಲ್ಲಿ ಮುಸ್ಲಿಂ ಮಹಿಳೆಯೊಬ್ಬಳ ಪಾತ್ರ ಚಿತ್ರಣ ಮತ್ತು ಕುವೆಂಪು ಅವರ ಕಾದಂಬರಿಗಳಲ್ಲಿ ಸಾನಿಯ ಚಿತ್ರಣ ಬಂದರೂ ಅದು ಹಿಂದೂ–ಮುಸ್ಲಿಂ ಸಾಮಾಜಿಕ ಸಮಸ್ಯೆಯ ಮತ್ತು ಪಾತ್ರವಾಗಿ ಕೈ ಮಾಡುತ್ತಿದೆಯೇ ಹೊರತು ಆ ಮಹಿಳೆಯ ಸಾನಿಯ ಅಧಿಕೃತ ಅನುಭವಗಳನ್ನು, ಅವಳ ತೀವ್ರತೆಗಳನ್ನು ಕಟ್ಟಿಕೊಡುವುದಿಲ್ಲ. ಇದೇರೀತಿ ಜಯತೀರ್ಥರಾಜ ಪುರೋಹಿತರ 'ಜೋಹರ್' ಕಾದಂಬರಿಯಲ್ಲಿ, ಚಂದ್ರಕಾಂತ ಕುಸನೂರ ಅವರ 'ಗೋ ಹರಜಾನ್' ಕಾದಂಬರಿಯಲ್ಲಾಗಲಿ, ವಿಶುಕುಮಾರ ಅವರ 'ಕರಾವಳಿ' ಕಾದಂಬರಿಯಲ್ಲಾಗಲಿ ಮುಸ್ಲಿಂ ಮಹಿಳೆಯ ಅಥೆಂಟಿಸಿಟಿ ಕಾಣುವುದಿಲ್ಲ. ಹೀಗಾಗಿ ಮುಸ್ಲಿಂ ಸಂಸ್ಕೃತಿಯ ಹಿನ್ನೆಲೆಯಿಂದ ಬಂದ ಲೇಖಕರಲ್ಲಿ ಅದೂ ಈ ಮೇಲೆ ಉಲ್ಲೇಖಿಸಿದ ಕೆಲವರಲ್ಲಿ ಮಾತ್ರ ಮುಸ್ಲಿಂ ಸಂವೇದನೆಯನ್ನು ದಟ್ಟವಾಗಿ ಮೂಡಿರುವುದನ್ನು ಕಾಣಬಹುದಾಗಿದೆ. ಇವರು ಚಿತ್ರಿಸಿದ ಮಹಿಳೆಯ ಸಮಸ್ಯೆಗಳು, ಬಡತನ, ಕುಟುಂಬದಲ್ಲಿ ಶೋಷಣೆ, ವರ್ಗ ಸಂಘರ್ಷ,

ಹತಾಸೆ, ನೋವು-ನಲಿವು, ಬಯಕೆಗಳಂತಹ ವಿವರಗಳನ್ನು ಅವರ ಕೃತಿಗಳ ಮೂಲಕವೇ ಅಧ್ಯಯನ ಮಾಡುವುದು.

ಸಣ್ಣಕತೆಯ ಪ್ರಕಾರಗಳಲ್ಲಿ ಮುಸ್ಲಿಂ ಸಂಸ್ಕೃತಿಯ ಅನೇಕ ಸಂವೇದನೆಗಳು ಈ ಎರಡು ದಶಕಗಳಲ್ಲಿ ದಾಖಲಾಗಿವೆ. ಬಿ.ಎ. ಸನದಿಯವರ 'ಕಪ್ಪುಕೋಲು', 'ಕೈಗೊಂಬೆ', 'ಹಸನ ಚಾಚಾ', ಕಟ್ಪಾಡಿಯವರ 'ನೋಂಬು', ಬೋಳವಾರ ಅವರ 'ದೇವರುಗಳ ರಾಜ್ಯದಲ್ಲಿ' ಮತ್ತು 'ಅಂಕ', ಅಬ್ದುಲ್ ರಶೀದ್ ಅವರ 'ಹಾಲು ಕುಡಿದ ಹುಡುಗ', ಬಾನು ಅವರ 'ಹೆಜ್ಜೆ ಮೂಡಿದ ಹಾದಿ', ಮುಮ್ತಾಜ್‌ಬೇಗಂ ಅವರ 'ಅವ್ಯಕ್ತ' ಈ ಮುಂತಾದ ಕಥಾಸಂಕಲನಗಳಲ್ಲಿ ಮುಸ್ಲಿಂರ ವಿವಿಧ ರೂಪಗಳನ್ನು ಬದುಕಿನ ತೀವ್ರ ಅನುಭವದ ಹಿನ್ನೆಲೆಯಲ್ಲಿ ಕಾಣಬಹುದಾಗಿದೆ.

ಬಿ.ಎ. ಸನದಿಯವರ 'ಕಪ್ಪುಕೋಲು' 'ಕೈಗೊಂಬೆ', 'ಹಸನ ಚಾಚಾ', ಬೋಳವಾರ ಅವರ 'ಇದ್ದತ್', 'ಹಸಿವು', 'ಒಂದು ಊರಿನ ಕಥೆ', 'ಅತ್ತ ಇತ್ತಗಳ ಸುತ್ತಮುತ್ತ', ಮುತ್ತುಚ್ಚೇರ, ಅಬ್ದುಲ್ ರಶೀದ್‌ರವರ 'ಕಪ್ಪು ಹುಡುಗನ ಹಾಡು', 'ಹಾಲು ಕುಡಿದ ಹುಡುಗ', ಸಾರಾ ಅವರ 'ಚಪ್ಪಲಿಗಳು' ಮತ್ತು ಬಾನು ಅವರ 'ರಾಹಿಲ' ಎಂಬ ಕನ್ಯೆಯ ಕಥೆ' ಮತ್ತು ಕಟ್ಪಾಡಿಯವರ ಜುಲೇಖ ಈ ಎಲ್ಲಾ ಕಥೆಗಳನ್ನು ಪ್ರಾತಿನಿಧಿಕವಾಗಿಟ್ಟುಕೊಂಡು ಇವುಗಳ ಪರೀಶೀಲನೆಯ ಮೂಲಕ ಮಹಿಳಾ ಪಾತ್ರ ಚಿತ್ರಣ, ಅವರ ಬಡತನ, ನೋವು-ನಲಿವು, ಶಿಕ್ಷಣ, ಆಚಾರ-ವಿಚಾರ, ಸಂಪ್ರದಾಯ ಮುಂತಾದ ವೈವಿಧ್ಯತೆಯನ್ನು ಅದರ ಒಳನೋಟಗಳನ್ನು ನೋಡಬಹುದಾಗಿದೆ.

**ಬಿ.ಎ. ಸನದಿ (೧೮.೦೮.೧೯೩೩) :**

ಸ್ವಾತಂತ್ರ್ಯದ ನಂತರದ ಅವಧಿಯಲ್ಲಿ ಸಾಹಿತ್ಯ ಕೃಷಿ ಪ್ರಾರಂಭಿಸಿದ ಮುಸ್ಲಿಂ ಲೇಖಕರಲ್ಲಿ ಬಿ.ಎ. ಸನದಿ ಅವರು ಪ್ರಮುಖರು. 'ಮಾನವ್ಯ ಕವಿ' ಎಂದು ವಿಮರ್ಶಕರಿಂದ ಕರೆಯಿಸಿಕೊಂಡ ಬಿ.ಎ. ಸನದಿಯವರು ಸಾಹಿತ್ಯಕ್ಕೆ ಕೊಟ್ಟ ಕೊಡುಗೆ ಅಪಾರವಾಗಿದೆ. ಕವಿ ಸನದಿಯವರು ಕ್ರಿ.ಶ. ೧೯೩೩ರಲ್ಲಿ ಬೆಳಗಾವಿ ಜಿಲ್ಲೆಯ ಸಿಂದೊಳ್ಳಿ ಗ್ರಾಮದಲ್ಲಿ ಜನಿಸಿದರು. ಬಾಲ್ಯದಿಂದಲೇ ಪ್ರತಿಭಾವಂತರಾಗಿದ್ದ ಸನದಿಯವರು ಶಿಕ್ಷಕರಾಗಿ ಸೇವೆ ಸಲ್ಲಿಸಿದ್ದಾರೆ. ಸನದಿಯವರು ಕವಿಯಾಗಿ, ಕಥೆಗಾರರಾಗಿ, ವಿಮರ್ಶಕರಾಗಿ ಪ್ರಸಿದ್ಧಿ ಪಡೆದಿದ್ದಾರೆ. ಬಿ.ಎ. ಸನದಿಯವರ ಕಾವ್ಯದಲ್ಲಿ ರಾಷ್ಟ್ರೀಯತೆ, ಪ್ರೇಮ, ಮಾತೃ ವಾತ್ಸಲ್ಯ, ಪ್ರಕೃತಿ ಚಿತ್ರಣ, ವ್ಯಕ್ತಿ ಚಿತ್ರಣ, ನಗರ ಪ್ರಜ್ಞೆಗಳು ಕಂಡುಬರುತ್ತವೆಯೇ ಹೊರತು ಮುಸ್ಲಿಂ ಸಮಾಜದ ಒಳನೋಟಗಳು ಕಂಡುಬರುವುದಿಲ್ಲವೆನ್ನಬಹುದು.

ಸನದಿಯವರ ಕಥೆಗಳನ್ನು ಮುಖ್ಯವಾಗಿ ಸ್ತ್ರೀ ಜೀವನದ ವಿವಿಧ ಮುಖಗಳಾದ ಅಸಹಾಯಕತೆ, ಸಹನೆ, ತ್ಯಾಗ, ಮನೋದೌರ್ಬಲ್ಯ, ಮೂಢನಂಬಿಕೆ, ಅಜ್ಞಾನಗಳು ಹೀಗೆ ಹಲವು ವಿಷಯಗಳ

ಕುರಿತು ರಚಿಸಿದ್ದಾರೆ. ಈ ರೀತಿ ಸಮಸ್ಯೆಗಳನ್ನಿಟ್ಟುಕೊಂಡು ರಚಿಸಿದ ಕಥೆಗಳೆಲ್ಲವೂ ಗ್ರಾಮೀಣ ಸಂಸ್ಕೃತಿಯನ್ನೊಳಗೊಂಡಿವೆ. ಆದರೆ ಮುಸ್ಲಿಂ ಸಮುದಾಯದ ವಿಶಿಷ್ಟ ಸಾಂಸ್ಕೃತಿಕ, ಸಾಮಾಜಿಕ ಸಮಸ್ಯೆಗಳು ಕಂಡುಬರುವುದಿಲ್ಲ. ಆದರೆ 'ಕಪ್ಪುಕೋಲು', 'ಒಂದು ಮದುವೆಯ ಸಂದರ್ಭದಲ್ಲಿ ನಿವೃತ್ತ ಪೊಲೀಸ್ ಅಧಿಕಾರಿ, ಉಸ್ಮಾನ್ ಸಾಹೇಬರು' ಮತ್ತು ಕಲಬುರ್ಗಿಯ ತಹಶಿಲ್ದಾರರಾದ ಬಷೀರ್ ಸಾಹೇಬರೆಂಬ ಅಪರಿಚಿತವಾದ ವ್ಯಕ್ತಿಗಳು ಹತ್ತಿರವಾಗಿ ಸ್ನೇಹ ಬೆಳೆಯುತ್ತದೆ. ಉಸ್ಮಾನ್ ಕಪ್ಪುಕೋಲು ಅಧಿಕಾರ ಚಲಾಯಿಸುವಂತೆ ಬಷೀರ್‌ರಿಂದ ಸ್ವಾರ್ಥ ಸಾಧಿಸಿಕೊಳ್ಳತ್ತಾ ಹೆಜ್ಜೆಯಿಡುತ್ತದೆ. ಈ ಕಥೆ ಪ್ರಾಮಾಣಿಕತೆ ಮತ್ತು ಭ್ರಷ್ಟಾಚಾರಗಳ ನಡುವಿನ ಸಂಘರ್ಷವನ್ನು ಚಿತ್ರಿಸಿದೆ.

'ಹಸನ ಚಾಚಾ' ಕಥೆಯು ವರ್ಣ, ಜಾತಿ, ಧರ್ಮಗಳು ಒಂದು ಸಮಾಜವನ್ನು ಕಲಕಿ ಸಾಮಾಜಿಕ ಸಾಮರಸ್ಯವನ್ನು ಹೇಗೆ ಹದಗೆಡಿಸುತ್ತವೆ ಎಂಬುದಕ್ಕೆ ಈ ಕಥೆಯೇ ಸಾಕ್ಷಿ. ಹಳ್ಳಿಗಳಲ್ಲಿಯ ಜನತೆಯ ಧರ್ಮಾಂದತೆಯು ಸಮಾಜದ ಸ್ವಾಸ್ಥ್ಯವನ್ನು ಕೆಡಿಸುತ್ತದೆ. ಜಾತಿಯ ಭೂತ ಅವರ ಬದುಕಿನಲ್ಲಿ ಸಂಘರ್ಷವನ್ನುಂಟು ಮಾಡಿದರೂ ಪ್ರತಿ ಅಂತಃಕರಣಗಳು ಮಾಡಿದಲ್ಲಿ ಧರ್ಮಕ್ಕೆ ಜಯವಾಗುತ್ತದೆ ಎಂಬುದು ಇಲ್ಲಿ ಸಾಧಿತವಾಗಿದೆ. ಇಲ್ಲಿ ಬರುವ ಹಸನ್ ಚಾಚಾ ಪ್ರೀತಿ ಅಂತಃಕರಣಗಳು ಮೂರ್ತಿ ಜಾತೀಯತೆಯನ್ನು ತೊಲಗಿಸಿ ತಮ್ಮ ಹಳ್ಳಿ ಜನತೆಯ ಮನಸ್ಸನ್ನು ಪ್ರೀತಿಯಿಂದ ಗೆದ್ದವನು. ಪರಸ್ಪರ ಉತ್ತಮ ಸಂಬಂಧ ನೆಲೆಗೊಳ್ಳುವುದಕ್ಕೆ ಯತ್ನಿಸಿ ಯಶಸ್ಸು ಕಾಣುತ್ತಾನೆ. ಪ್ರೀತಿಯಿಂದ ಮಾನವೀಯ ಸಂಬಂಧಗಳನ್ನು ಗಟ್ಟಿಗೊಳಿಸುವುದು ಜಾತಿಯಂಥ ಸಮಸ್ಯೆಗಳನ್ನು ನಿವಾರಿಸಿ, ಆರೋಗ್ಯ ಪೂರ್ಣವಾದ ಸಮಾಜವನ್ನು ಕಟ್ಟಲು ಪ್ರೀತಿಯಿಂದ ಮಾತ್ರ ಸಾಧ್ಯವೆಂಬುದನ್ನು ಕಥೆಗಾರರು ನಿರೂಪಿಸಿದ್ದಾರೆ.

ಒಟ್ಟಿನಲ್ಲಿ ಡಾ. ಜಿ.ಎಸ್. ಆಮೂರ ಅವರು 'ಅನುಭವ'ದ ಮುನ್ನುಡಿಯಲ್ಲಿ ಹೇಳಿರುವಂತೆ "ಬಿ.ಎ. ಸನದಿ ಅವರು ಮುಖ್ಯ ಮಾಧ್ಯಮ ಪದ್ಯವಾದರೂ, ದೀರ್ಘಕಾಲದಿಂದಲೂ ಅವರು ಸಣ್ಣಕತೆಗಳನ್ನು ಬರೆಯುತ್ತಾ ಬಂದವರು. ಸರಳವಾದ ನಿರೂಪಣೆ, ಸೂಕ್ಷ್ಮ ನಿರೀಕ್ಷಣಾ ಸಾಮರ್ಥ್ಯ, ಸಾಮಾನ್ಯವೆನಿಸುವ ಅನುಭವಗಳಲ್ಲೂ ಜೀವನ ಜಿಜ್ಞಾಸೆಯ ಕುತೂಹಲ ಮಾನವೀಯ ಮೌಲ್ಯಗಳ ಕುರಿತು ಕಳಕಳಿ ಈ ಎಲ್ಲ ಅವರ ಕಥೆಗಾರಿಕೆಯ ಮುಖ್ಯ ಗುಣಗಳಾಗಿವೆ. ಹಳ್ಳಿಗರ ಜೀವನವಂತೂ ಅವರು ಸಮರ್ಥವಾಗಿ ಚಿತ್ರಿಸಬಲ್ಲ ಲೇಖಕರು. ಅವರ ಎರಡನೆಯ ಕಥಾ ಸಂಗ್ರಹ ಅನುಭವದಲ್ಲೂ ನಾವು ಈ ಎಲ್ಲ ಗುಣಗಳನ್ನು ಗುರುತಿಸಬಹುದು."[೪]

**ಅಬ್ದುಲ್ ರಶೀದ್ (೧೯೬೫) :**

ಸಮಕಾಲೀನ ಹಿರಿಯ ಮುಸ್ಲಿಂ ಕಥೆಗಾರರಿಗಿಂತ ಭಿನ್ನವಾಗಿ ಬರೆಯುವ ರಶೀದ್‌ರವರು ಕೊಡುಗು ಜಿಲ್ಲೆಯ ಸುಂಡಿಕೊಪ್ಪದಲ್ಲಿ ೨೮.೦೨.೧೯೬೫ರಲ್ಲಿ ಜನಿಸಿದರು. ಅವರು ಎಚ್.ಎಂ.

ಇಸ್ಮಾಯಿಲ್ ರೈಟರ ಅವರ ಮಗನಾಗಿದ್ದಾರೆ. ಬಾಲ್ಯದಿಂದಲೂ ಕೊಡಗಿನ ಪರಿಸರ, ಮಳೆ, ಕಾಫಿ, ರಬ್ಬರ್ ತೋಟಗಳ ಜೊತೆ ಬೆಳೆದು ತಮ್ಮ ಪದವಿ ಶಿಕ್ಷಣವನ್ನು ಮಹಾರಾಜ ಕಾಲೇಜಿನಲ್ಲಿ ಮುಗಿಸಿಕೊಂಡ ರಶೀದ್‌ರು ಎಂ.ಎ. ಪದವಿಯನ್ನು ಮಾನಸ ಗಂಗೋತ್ರಿ ಮೈಸೂರು ವಿಶ್ವವಿದ್ಯಾಲಯದಿಂದ ಪಡೆದುಕೊಂಡರು.

"ಮುಸ್ಲಿಂ ಸಣ್ಣಕಥೆ ಎರಡು ಭಿನ್ನ ಧಾರೆಯಲ್ಲಿ ಮುನ್ನಡೆಯುತ್ತಿದೆ. ರಶೀದ್ ಮತ್ತೊಂದು ಧಾರೆಯನ್ನು ಸೇರಿಸುತ್ತಿದ್ದಾರೆ. ಅವರ ಕಥೆಗಳಲ್ಲಿ ಮಗುವಿನ ಮುಗ್ಧ ಕುತೂಹಲವಿದೆ. ಬೆರಗಿನಿಂದ ವೀಕ್ಷಿಸುವ ರಶೀದ್ ಕಾವ್ಯಾತ್ಮಕ ಶೈಲಿಯನ್ನು ರೂಢಿಸಿಕೊಂಡಿದ್ದಾರೆ. ಈ ಬೆರಗು, ಈ ಕಾವ್ಯಾತ್ಮಕತೆ, ಮುಸ್ಲಿಂ ಸಣ್ಣಕತೆಗೆ ಒಂದು ವಿಶಿಷ್ಟ ಸಂವೇದನೆಯನ್ನು ಜೋಡಿಸಿದೆ"[೫] ಎನ್ನುವ ಟಿ.ಪಿ. ಅಶೋಕರ ಮಾತು ಸಮಂಜಸವಾಗಿದೆ.

'ಹಾಲು ಕುಡಿದ ಹುಡುಗ' ಸಂಕಲನದಲ್ಲಿ ಪ್ರಕೃತಿ ಪರಿಸರದ ಚಿತ್ರಣವು ಹೆಚ್ಚಾಗಿ ಒಂದೇ ರೀತಿಯದಾಗಿದೆ. ಗ್ರಾಮೀಣ ಸನ್ನಿವೇಶಗಳಿಂದ ಕೂಡಿದ ಇವರ ಕಥೆಗಳಲ್ಲಿ ಕೊಡಗಿನ ಕಾಫಿ ತೋಟ, ರಬ್ಬರ್ ತೋಟಗಳ ಪರಿಸರದ ವಸ್ತುವಿದೆ. 'ಹಾಲು ಕುಡಿದ ಹುಡುಗ' ಕಥೆಯು ಒಂದು ಗುಡುಗಿಯ ಹಾಲು ಕುಡಿದಾಗ ಮೂರು ಜನ ಹೆಂಗಸರು ಅವನನ್ನು ಗೋಳಾಡಿಸುವುದು ಕಥೆಗಳಲ್ಲಿ ಮೂಡಿಬಂದಿದೆ. ಅಲ್ಲಿನ ಕೆಳ-ಮಧ್ಯಮ ವರ್ಗದ ಮುಸ್ಲಿಂ ಬದುಕಿನ ಒಳಲೋಕವನ್ನು ಮೃದುವಾಗಿ ತೆರೆದು ತೋರಿಸುತ್ತಾರೆ. ಇದಲ್ಲದೆ ಮುಗ್ಧತೆ ಎಂಬುದನ್ನು ಕಥೆಗಳಲ್ಲಿ ಮೂಡಿಸುವಾಗ ಮಕ್ಕಳ ಬಾಲ್ಯದ ಲೋಕವನ್ನು ಪ್ರಬುದ್ಧತೆಯ ಪ್ರಪಂಚಕ್ಕೆ ಹೋಲಿಸುವುದರ ಮೂಲಕ ಜೀವನದ ಹಲವು ಸತ್ಯ ಘಟನೆಗಳನ್ನು ಒಟ್ಟಿಗೆ ಹೇಳುವ ಮಹತ್ವಕಾಂಕ್ಷೆಯನ್ನು ಇವರ ಕಥೆಯಲ್ಲಿ ಕಾಣುತ್ತೇವೆ.

'ಹಾಲು ಕುಡಿದ ಹುಡುಗ' ಕಥೆಯಲ್ಲಿ "ಬಾಲ್ಯದ ಕೆಲವು ಸಂಭ್ರಮಗಳನ್ನು ವಿಶ್ಲೇಷಣೆ ಗೋಜಿಲ್ಲದೆ ಮಂಡಿಸುವ ಸುಂದರ ಕಥೆ. ಪುಟ್ಟ ಹುಡುಗ ಅಥವಾ ಹುಡುಗಿಯ ದೃಷ್ಟಿಕೋನದಿಂದ ಅಥವಾ ಆ ಮಕ್ಕಳ ತಾಯಂದಿರ ದೃಷ್ಟಿಕೋನದಿಂದ ನೋಡಿದರೂ ಸೌಂದರ್ಯ ಮಸಕಾಗುವುದಿಲ್ಲ. ಪ್ರೀತಿಯ ರಸ ನಿಮಿಷಗಳನ್ನು ಶಬ್ದಗಳಲ್ಲಿ ದಾಖಲಿಸುವ ರಶೀದ್, ಕೃಷ್ಣನ ಬಾಲಲೀಲೆಯನ್ನು ನೆನಪಿಸುವಂತ ಒಂದು ಕಥೆಯಾಗಿದೆ"[೬]

ಇವರ ಮತ್ತೊಂದು ಕಥೆಯಾದ 'ಕಪ್ಪು ಹುಡುಗನ ಹಾಡು' ಮಕ್ಕಳ ಮುಗ್ಧತೆಗೂ, ಪ್ರಬುದ್ಧರ ಆಳಲಿಗೂ ಅರ್ಥಪೂರ್ಣ ಹೋಲಿಕೆಯಿದೆ. ಬರಹ ಜಟಿಲವಾಗುತ್ತದೆ. ಸಾರಾತಾತಾಳ ಪಾತ್ರ ತುಂಬಾ ವಿನೂತನವಾದುದು. ಹಮೀದ್ ಎನ್ನುವ ಮುಗ್ಧ ಹುಡುಗನ ಮೂಲಕ ಕತೆ

ಬಿಚ್ಚಿಕೊಳ್ಳುವ ಈ ಕತೆಯಲ್ಲಿ ಸಾರಾತಾತಾಳ ವಾತ್ಸಲ್ಯ ಮತ್ತು ಮೂಕವೇದನೆ ಮಡುಗಟ್ಟಿ ನಿಂತಿದೆ. ಸಾರಾತಾತಾ ಮತ್ತು ಕೂರಗ ಇವರ ದೈಹಿಕ ಸಂಬಂಧದಿಂದ ಹುಟ್ಟಿದ ಹಮೀದ್‌ನಿಗೆ ಸಾರಾತಾತಾ ತನ್ನ ತಾಯಿಯೆಂದು, ಕೂರಗ ತನ್ನ ತಂದೆಯೆಂದು ಗೊತ್ತಾದಾಗ ಅಚ್ಚರಿಯಾಗುತ್ತದೆ. ಅವ್ಯಕ್ತ, ಆನಂದವುಂಟಾಗುತ್ತದೆ. ಮೊದಲು ಸಾರಾತಾತಾ ಹಮೀದ್‌ನನ್ನು ಕಂಡಾಗ ಅಪ್ಪಿಕೊಂಡು ಮುದ್ದಾಡುವುದು, ವಾತ್ಸಲ್ಯದಿಂದ ಕಣ್ಣೀರುಡುವುದು, ಆ ಹುಡುಗನಿಗೆ ಲುಂಗಿ ಕೊಡಿಸುವುದು ಈ ಎಲ್ಲ ಕ್ರಿಯೆಯಲ್ಲಿ ಸಾರಾತಾತಾಳ ಪಾತ್ರ ವಿಶಿಷ್ಟವಾಗಿ ಕಾಣುತ್ತದೆ. ರಶೀದ್‌ರ ಕಥೆಗಳ ಅನುಭವ ಪ್ರಪಂಚ ಎಷ್ಟು ಸತ್ವಪೂರ್ಣವಾದದ್ದೆಂದರೆ ಅನುಭವಗಳನ್ನು ದಟ್ಟವಾಗಿ ಮಂಡಿಸುತ್ತಾರೆ.

"ಹಮೀದ್ ಬಾಲ್ಯ ಕಳೆದು ಅವನು ವಯಸ್ಕನಾದಾಗ ಮತ್ತರೆಯು ಹಾಗಾಗುತ್ತಾನೆಯೆ? ಶ್ರಮಿಕ ವರ್ಗದ ಮುಗ್ಧತೆ, ರಾಜಕೀಯ ಪ್ರಬುದ್ಧತೆಗಾಗಿ ರೂಪಾಂತರಗೊಳ್ಳುವುದೇ? ಮುಗ್ಧತೆ ಒಂದು ದೈಹಿಕ, ಮಾನಸಿಕ ಸ್ಥಿತಿಯಂತೆ ಒಂದು ನೈತಿಕ ಮೌಲ್ಯವು ಹೌದಲ್ಲವೇ? ಹಾಗಾದಾಗ ಅದು ಒಂದು ದೌರ್ಬಲ್ಯವಾದಾಗ ಹಾಗೆ ತಡೆಗಟ್ಟುವ ಮಾರ್ಗವಾವುದು? ಮುಂತಾದ ಪ್ರಶ್ನೆಗಳು ಓದುಗರ ಮನಸ್ಸಿನಲ್ಲಿ ಕೃತಿಗಳ ಅನುಭವದಿಂದ ಸಹಜವಾಗಿ ಕಟ್ಟಿಕೊಳ್ಳುವಂಥದು ಎಂಬ ಟಿ.ಪಿ. ಅಶೋಕ ಅವರ ವಿಮರ್ಶೆ ಸಮಂಜಸವಾಗಿದೆ."[೭]

ಅಬ್ದುಲ್ ರಶೀದ್‌ರವರ ಈ ಎರಡು ಕತೆಗಳಲ್ಲಿ ಮೊದಲನೆಯ ಕಥೆಯಲ್ಲಿ ಬಾಲ್ಯದ ಕೆಲವು ಸಂಭ್ರಮಗಳನ್ನು ವಿಶ್ಲೇಷಣೆ ಗೋಜಿಲ್ಲದೆ ಮಂಡಿಸುವ ಒಂದು ಸುಂದರ ಕಥೆಯಾದರೆ, ಕಪ್ಪು ಹುಡುಗನ ಹಾಡು ಮಕ್ಕಳ ಮುಗ್ಧತೆಗೂ, ಪ್ರಬುದ್ಧರ ಆಳಲಿಗೂ ಅರ್ಥಪೂರ್ಣ ಹೋಲಿಕೆಯಿದೆ. ಅಬ್ದುಲ್ ರಶೀದ್‌ರವರು ಮುಸ್ಲಿಂ ಶ್ರೇಷ್ಟ ಲೇಖಕರ ಸಾಲಿನಲ್ಲಿ ಸೇರುತ್ತಾರೆ. ಇವರು ಕಟ್ಪಾಡಿಯವರಂತೆ ಮುಗ್ಧ ಬಾಲಕರಿಂದ ಕಥೆಯನ್ನು ಬಿಚ್ಚಿಡುತ್ತಾರೆ. ಇವರ ಕಥೆಯಲ್ಲಿ ಕೊಡಗಿನ ಪರಿಸರದ ರಮ್ಯತೆಯ ಹೊಸ ನಾದ ಕಂಡುಬರುತ್ತದೆ.

**ಬೊಳವಾರು ಮುಹಮ್ಮದ್ ಕುಂಞ (೨೨.೧೦.೧೯೫೧) :**

ಮುಸ್ಲಿಂ ಸಂಸ್ಕೃತಿಯ ಸಮಾಜದ ಸಂವೇದನೆಗಳು ಪ್ರಮುಖವಾಗಿವೆ. ಮುಸ್ಲಿಂ ಬದುಕಿನ ಅಂತರಂಗವನ್ನು ಕನ್ನಡ ಸಾಹಿತ್ಯದಲ್ಲಿ ಅಧಿಕೃತವಾಗಿ, ಅರ್ಥಪೂರ್ಣವಾಗಿ ಬಿಂಬಿಸಲು ತಮ್ಮ ಸಂಸ್ಕೃತಿಯ ಒಳನೋಟಗಳ ಸೂಕ್ಷ್ಮತೆಯನ್ನು ತಮ್ಮೊಳಗೆ ತೀವ್ರವಾಗಿ ತುಡಿಯುತ್ತಿರುವ ಅನುಭವಗಳನ್ನು ಬರಹದ ಮೂಲಕ ದಾಖಲಿಸಿದ ಲೇಖಕರ ಸಾಲಿನಲ್ಲಿ ಬೊಳವಾರು ಮುಹಮ್ಮದ ಕುಂಞ ಅವರು ಮುಖ್ಯರು.

ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರಿನ ಬಳಿ ಬೊಳವಾರು ಗ್ರಾಮದಲ್ಲಿ ಕಡುಬಡತನದ ಕುಟುಂಬವೊಂದರಲ್ಲಿ ೨೨ ಅಕ್ಟೋಬರ್ ೧೯೫೧ರಲ್ಲಿ ಜನಿಸಿದರು. ಬೊಳುವಾರು ಅವರು ನಿರ್ಲಕ್ಷಕ್ಕೆ ಒಳಗಾಗಿದ್ದ ತಮ್ಮ ಜನಾಂಗದ ದುಃಖ-ದುಮ್ಮಾನಗಳನ್ನು ಸಮಗ್ರ ಸಮುದಾಯದ ನಡುವೆ ತೆರೆದಿಡುವ ಪ್ರವೃತ್ತಿಗೆ ತೊಡಗಿ ಕಥೆಗಳ ಮೂಲಕ ಬರೆಯುವುದಕ್ಕೆ ಪ್ರಾರಂಭಿಸಿದರು.

ಎಲ್ಲ ಮುಸ್ಲಿಂ ಲೇಖಕರಲ್ಲಿಯೇ ವಿಶೇಷವಾಗಿ ತಮ್ಮ ಛಾಪಿನಿಂದ (ಶೈಲಿಯಿಂದ) ಚಿರಪರಿಚಿತರಾದ ಇವರು ಎಲ್ಲ ಜಾತಿ-ಮತಗಳ, ಜನರ ವರ್ತನೆಗಳನ್ನು ಸಮನಾಗಿ ಕಾಣುವ ಇವರ ಬರವಣಿಗೆಯಲ್ಲಿ ವಿನೋದದ ಪ್ರಸಂಗಗಳನ್ನು ಹಾಸುಹೊಕ್ಕಾಗಿ ಹೇಳುತ್ತಲೇ ತಮ್ಮ ಜನಾಂಗದ ನೋವಿನ ಅಳಲನ್ನು ಬರಹದ ಮೂಲಕ ಬಿಚ್ಚಿಡುತ್ತಾರೆ.

'ಹಸಿವು' ಕಥೆಯಲ್ಲಿ ಅಂದಚ್ಚು ಬೀಡಿ ಕಟ್ಟುವ ಬ್ರ್ಯಾಂಚಿನ ಮಾಲೀಕ ಜನರೆದುರಿಗೆ ಬ್ರಹ್ಮಚಾರಿಯಾದರೂ, ಒಳಗೆ ಲಕ್ಷ್ಮಮ್ಮ ಎಂಬ ವಿಧವೆಯೊಡನೆ ಸಂಬಂಧ ಇಟ್ಟುಕೊಂಡಿದ್ದ. ಆತನ ಬೀಡಿ ಬ್ರ್ಯಾಂಚಿಗೆ ಸಾಕಷ್ಟು ಜನ ಬೀಡಿ ಕಟ್ಟಲು ಬರುತ್ತಿದ್ದರು. ಹಾಗೆ ಬರುವವರಲ್ಲಿ ಹೆಣ್ಣು ಮಕ್ಕಳ ದಂಡೇ ಅತಿಯಾಗಿತ್ತು. ಅದರಲ್ಲೊಬ್ಬಳು ಸರೋಜ ಎನ್ನುವ ಹುಡುಗಿ ಆಕೆಗೆ ಈಗಲೋ ಆಗಲೋ ಸಾಯುವ ತಾಯಿ ಆಕೆಯನ್ನು ಆಸ್ಪತ್ರೆಗೆ ಸೇರಿಸಿದ್ದಳು. ಆಕೆಗೆ ಔಷದಿ ತರಲು ಹಣವಿಲ್ಲ. ತಾನು ಬೀಡಿ ಕಟ್ಟುತ್ತಿದ್ದ ಬ್ರ್ಯಾಂಚಿನ ಮಾಲೀಕನಾದ ಅಂದಚ್ಚುವಿನ ಬಳಿ ಹಣ ಕೇಳುತ್ತಾಳೆ. ಆತ ಆಕೆಯನ್ನು ತನ್ನ ರೂಮಿಗೆ ಕರೆಸಿಕೊಂಡು ಅತ್ಯಾಚಾರ ಮಾಡುತ್ತಾನೆ. ಆಕೆಯ ತಾಯಿ ಆಸ್ಪತ್ರೆಯಲ್ಲಿ ಸಾಯುವ ಹೊತ್ತಿಗೆ ಈಕೆಯೂ ಆತ್ಮಹತ್ಯೆ ಮಾಡಿಕೊಂಡು ಪ್ರಾಣ ಬಿಡುತ್ತಾಳೆ.

ಹೀಗೆ ಸಮಾಜದಲ್ಲಿ ಬಡತನ ತಾಂಡವಾಡುತ್ತಿದೆ. ಬಡವರ ಬದುಕಿಗೆ ಹಸಿವು ಅನಿವಾರ್ಯ. ಅದನ್ನು ದುರುಪಯೋಗಪಡಿಸಿಕೊಳ್ಳುವ ಹಣವಂತರ ಪಾಲಿಗೆ ಹೆಣ್ಣು ಆಟದ ವಸ್ತುಗಳಾಗುತ್ತಾಳೆ. ಸರೋಜಳಂತಹ ಅಮಾಯಕ ಯುವತಿಯರು ತಮ್ಮ ಬಡತನದ ಕಾರಣಕ್ಕಾಗಿ ದೌರ್ಜನ್ಯಕ್ಕೆ ಬಲಿಯಾಗುವ ದಾರುಣ ಚಿತ್ರಣ ಈ ಕಥೆಯಲ್ಲಿ ವ್ಯಕ್ತವಾಗಿದೆ.

"ಹಸಿವು ಕಥೆಯ 'ಸರೋಜ' ಬೀಡಿ ಕಟ್ಟುವ ಸಾವಿರಾರು ಹೆಣ್ಣುಮಕ್ಕಳ ಪ್ರತಿನಿಧಿ-ಅನಾಥ ಹೆಣ್ಣುಮಕ್ಕಳು ಅಬಲೆಯರಾಗಿ ಬದುಕುತ್ತಿರುವ ಭಾರತದ ದೈನ್ಯಸ್ಥಿತಿಯನ್ನು ಈ ಕಥೆ ಹೇಳುತ್ತದೆ."[೮]

'ಒಂದು ಊರಿನ ಕಥೆಯಲ್ಲಿ' ಆದಂಖಾನರು ದೇವರ ಮೇಲೆ ಅಪಾರ ಭಕ್ತಿಯುಳ್ಳವರು. ಇವರ ತಂದೆ ಈ ಹಿಂದೆ ಊರಲ್ಲಿ ಮಸೀದಿ ಕಟ್ಟಿಸಿದ ಕಾರಣ ಇವರಿಗೆ ಊರಿನಲ್ಲಿ ಹೆಚ್ಚಿನಮರ್ಯಾದೆ, ದೇವರ ಹೆಸರು ಹೇಳಿ ಮುಗ್ಧ ಜನರಿಗೆ ಮೋಸ ಮಾಡುವ ಸೂಫಿ ಸಾಹುಕಾರ,

ಜಮಾತಿನ ಅಧ್ಯಕ್ಷರು ಸೇರಿ, ಸಭ್ಯ ಮನುಷ್ಯ ಆದಂಖಾನರ ಮಸೀದಿ ಬಳಿ ಇರುವ ಹನ್ನೆರಡು ಸೆಂಟ್ಸ್ ಅಳತೆಯ ಜಾಗೆಯಲ್ಲಿ ಮದರಸ ಕಟ್ಟಿಸುವುದಕ್ಕಾಗಿ ಅದನ್ನು ಕೇಳುತ್ತಾರೆ. ಆದಂಖಾನ ಅಂದೇ ಅವರಿಗೆ ನೀಡುತ್ತಾರೆ. ಆ ದಿನವೇ ಅವರಿಗೊಂದು ಕನಸು ಬೀಳುತ್ತದೆ. ಒಂದು ಆಡು ಕಾಡಿನಲ್ಲಿ ಹೊರಟಿದೆ. ಹುಲಿಗಳ ದಂಡೊಂದು ಆ ಆಡನ್ನು ನೋಡಿ ಓಡಿಬಂದು ಅದರ ಸುತ್ತ ಕುಣಿಯುತ್ತ ಕೇಕೆ ಹಾಕುತ್ತವೆ. ಈ ಕನಸಿಗೂ, ಶಾಲೆ ಕಟ್ಟಿಸುವ ಸಲುವಾಗಿ ತಮ್ಮ ತಂದೆಯ ಹರಕೆಯ ನೆನಪಾಗಿ ಜಾಗವನ್ನು ಕಿತ್ತುಕೊಂಡಿರುವುದಕ್ಕೂ ಸಂಬಂಧವಿದೆಯೇ ಎಂದು ಪ್ರಶ್ನಿಸಿಕೊಳ್ಳುತ್ತಾನೆ. ಅದರಂತೆ ಸೂಫಿ ಸಾಹುಕಾರ ಆ ಜಾಗೆಯನ್ನು ತನ್ನ ಹೆಸರಿನಲ್ಲಿ ಮಾಡಿಕೊಂಡು ಎರಡು ಅಂತಸ್ತಿನ ಮನೆ ಕಟ್ಟಿಸಿಕೊಳ್ಳುತ್ತಾನೆ. ಹೀಗೆ ದೇವರ ಹೆಸರಿನಲ್ಲಿ ನಡೆಯಬಹುದಾದ ಸುಲಿಗೆ, ಮೋಸ, ವಂಚನೆಗಳನ್ನು ಆದಂಖಾನರ ಕೊನೆಯ ಮಗ ಇಸ್ಮಾಯಿಲ್‌ಖಾನ ತಮ್ಮ ಮನೆಯ ಪಕ್ಕದ ಸೂಫಿ ಸಾಹುಕಾರ ಎರಡು ಅಂತಸ್ತಿನ ಮನೆ ನೋಡಿ ದುಃಖಿಸುವುದು ಈ ಕಥೆಯಲ್ಲಿ ವ್ಯಕ್ತವಾಗಿದೆ.

'ಅತ್ತ ಇತ್ತ ಸುತ್ತ ಮುತ್ತ' ಕಥೆಯಲ್ಲಿ ಹೆಣ್ಣಿನ ಶೋಷಣೆಯನ್ನು ಕಾಣಬಹುದು. ಯಾವುದೇ ತಪ್ಪು ಮಾಡದ ಹೆಣ್ಣು, ಸಲೀಂನಿಂದ ತಲಾಖ್ ಪಡೆದು ಮತ್ತೆ ಅವನನ್ನೇ ಪತಿಯಾಗಿ ಪಡೆಯಬೇಕಾದರೆ, ಪರಪುರುಷನನ್ನು ಒಂದು ದಿನದ ಮಟ್ಟಿಗೆ ನಿಖಾಹ್ ಆಗಿ ಒಂದು ದಿನ ರಾತ್ರಿ ಅವನೊಟ್ಟಿಗೆ ಕಳೆದು ಅವನಿಂದ ತಲಾಖ್ ಪಡೆದ ನಂತರವೇ ತನ್ನ ಹಿಂದಿನ ಪತಿಯನ್ನು ಮದಿವೆಯಾಗಲು ಅನುಮತಿ ಇದು ಕುರಾನ್ ವಿಧಿಸಿರುವ ಕಾನೂನಾಗಿದೆ. ಸಲೀಂ ಮತ್ತು ಅಬ್ದುಲ್ಲಾ ಇಬ್ಬರೂ ಆ ಹೆಣ್ಣನ್ನು ಪ್ರೀತಿಸುತ್ತಿದ್ದರೂ ಮದುವೆಯಾಗಿದ್ದು ಸಲೀಂ ತಲಾಖ್‌ನ ಅರ್ಥ ಗೊತ್ತಿಲ್ಲದ ಅನರ್ಥಕ್ಕೆ ಅಬ್ದುಲ್ಲಾ ಒಂದುದಿನದ ಗಂಡನಾಗಲು ಹೆಣ್ಣಿನ ತಂದೆಯಿಂದ ಮೂರು ಸಾವಿರ ರೂಪಾಯಿ ಪಡೆದು ಒಂದುದಿನದ ಮದುವೆಗೆ ಒಪ್ಪುತ್ತಾನೆ. ತಪ್ಪು ಮಾಡಿದ ಸಲೀಂ ಗೆಳೆಯ ಅಬ್ದುಲ್ಲಾನಿಗೆ 'ನನಗೆ ನಿನ್ನ ಮೇಲೆ ನಂಬಿಕೆಯಿದೆ ಅದನ್ನು ಉಳಿಸು' ಎನ್ನುತ್ತಾನೆ. ಸಲೀಂನಿಗೆ ಕೊಟ್ಟ ಮಾತಿನಂತೆ ಅಬ್ದುಲ್ಲಾನಲ್ಲಿ ಅನೇಕ ರೀತಿಯ ವಿಚಾರಗಳು ಹುಟ್ಟಿಕೊಳ್ಳುತ್ತವೆ. ಈ ಮೊದಲು ತಾನು ಪ್ರೀತಿಸುತ್ತಿದ್ದ ಹೆಣ್ಣು ಅನಾಯಾಸವಾಗಿ ತನ್ನ ಹೆಂಡತಿಯಾಗುವ ಅವಕಾಶವನ್ನು ಅದುಮಿ ತ್ಯಾಗಮಯಿಯಾಗುತ್ತಾನೆ. ಅವಳ ಹೊಟ್ಟೆಯಲ್ಲಿ ಬೆಳೆಯುತ್ತಿರುವ ಮಗು ಸಲೀಂನದೆಂದು ತಿಳಿದು ಬೆಳಗಾಗುವ ಮೊದಲೇ ಅಬ್ದುಲ್ಲಾ, ಖಾಜಿ ಸಮಕ್ಷಮದಲ್ಲಿ ಅವಳಿಗೆ ತಲಾಕ್ ನೀಡುತ್ತಾನೆ. ಯಾರೋ ಮಾಡಿದ ತಪ್ಪನ್ನು ಇನ್ನಾರೋ ಅನುಭವಿಸುವಂಥ ಕಠಿಣ ಧರ್ಮಾಚರಣೆಯ ಹಿನ್ನೆಲೆಯಲ್ಲಿ ಅಮಾಯಕ ಹೆಣ್ಣಿನ ಶೋಷಣೆಯ ಚಿತ್ರಣವಿದೆ.

"ಬೊಳುವಾರರ ಈ ಕತೆಯ ಹೆಣ್ಣು ವಿಧಿಗೆ ಕೇವಲ ವಸ್ತುವಾಗಿ ತನ್ನ ತಂದೆಯ ಪ್ರತಿಷ್ಠೆ ಹಾಳಾಗದಂತೆ ಕಾಪಾಡಲು ಕಾವಲು ಗೋಡೆಯಾಗುವ ವಸ್ತುವನ್ನು ತಿಳಿಸುತ್ತದೆ"[೬] ಈ ಸಂಕಲನದ ಕಥೆಯಲ್ಲಿ ಸ್ವಾರ್ಥ, ಮಾನಸಿಕ ತೋಳಲಾಟ, ದೇವರ ಹೆಸರಿನಲ್ಲಿ ಅನರ್ಥ, ಹೆಣ್ಣಿನ ಶೋಷಣೆ, ಧರ್ಮಗಳು ಗಯ್ಯುವ ಕೃತ್ಯಗಳು ವ್ಯಕ್ತಿಗಳ ಅಪರಾಧಿ ಮನೋಭಾವದ ಕಲ್ಪನೆ, ಅಪರಾಧಕ್ಕೆ ಪ್ರಾಯಶ್ಚಿತ್ತ ಹೀಗೆ ಹಲವಾರು ವಿಷಯಗಳು ವಿವಿಧ ಮುಖಗಳಿಂದ ಭಿನ್ನಭಿನ್ನ ವಸ್ತುಗಳು ಬಿತ್ತರಗೊಂಡಿವೆ.

ಮುತ್ತುಚ್ಚೇರ ಗ್ರಾಮದಲ್ಲಿನ ಬಡ ಹೆಣ್ಣಮಕ್ಕಳನ್ನು ಅರಬ್ಬರು ಕೊಂಡುಕೊಳ್ಳುವ ಕಥೆಯಾಗಿದೆ. ಮದುವೆ ಮಾಡಿಸಿ ಬಂದ ಹಣದಿಂದ ತನ್ನ ಕುಟುಂಬವನ್ನು ನಡೆಸುವ ಬೀರಾನ್‌ಕೋಯಾ ದಲ್ಲಾಳಿಯಾಗಿದ್ದಾನೆ. ರುಖಿಯಾಬಿ ಹಾಗೂ ಉನ್ನಿಸಾಳ ಪಾತ್ರಗಳು ಈ ಕಥೆಯಲ್ಲಿ ನೈಜವಾಗಿ ಚಿತ್ರಿತಗೊಂಡಿವೆ. ಬಡತನದಲ್ಲೂ ಅಪ್ರತಿಮ ಸೌಂದರ್ಯವನ್ನು ಪಡೆದ ರುಖಿಯಾಬಿಯಾಳಿಗೆ ಬೀರಾನ್‌ಕೋಯಾ ಅರಬ್ಬಿನ ಶೇಕ್ ಮುಸ್ತಾಫ್‌ನೊಡನೆ ಮದುವೆ ಮಾಡಿಸುತ್ತಾನೆ. ಶೇಕ್‌ಮಸ್ತಾಫ್ ತನಗಿಷ್ಟ ಬಂದಷ್ಟು ದಿನ ರುಖಿಯಾಬಿಯಾಳೊಂದಿಗೆ ಇದ್ದು ನಂತರ ಹೇಳದೆ ಕೇಳದೆ ಅವಳನ್ನು ಬಿಟ್ಟು ಹೊರಟು ಹೋಗುತ್ತಾನೆ. ರುಖಿಯಾಬಿ ಆಗ ಗರ್ಭವತಿಯಾಗುತ್ತಾಳೆ. ಅವಳಿಗಾದ ಅನ್ಯಾಯವನ್ನು ಊರಿನ ಯೂತ್‌ಲೀಗನ ಯುವಕ ಸಂಘದವರು ಈ ಅನಿಷ್ಟ ಪದ್ಧತಿ ವಿರೋಧಿಸುತ್ತಾರೆ. ಅರಬ್ಬರು ಇಲ್ಲಿಗೆ ಬಂದ ಬಡ ಹೆಣ್ಣುಗಳೊಂದಿಗೆ ಲಗ್ನವಾಗಿ (ನಿಖಾಹ್) ಇಷ್ಟು ದಿನ ಅವರನ್ನು ಉಪಯೋಗಿಸಿ ಹೇಳದೇ ಕೇಳದೇ ಬಿಟ್ಟು ಹೋಗುವ ಕ್ರಮವನ್ನು ತಡೆಗಟ್ಟುವುದೇ ಅವರ ಚಳವಳಿಯಾಗುತ್ತದೆ.

ಕಥೆಯಲ್ಲಿ ಬೀರಾನ್‌ಕೋಯಾನ ಕುತಂತ್ರವನ್ನು ತಿಳಿದ ರುಖಿಯಾಬಿಯು ಅರಬ್ಬರಿಗೆ ತನ್ನ ಮಗಳು ಉನ್ನಿಸಾಳನ್ನು ಕೊಡಲು ನಿರಾಕರಿಸುತ್ತಾಳೆ. ತನಗಾದ ದುರ್ಗತಿ ತನ್ನ ಮಗಳಿಗಾಗುವುದನ್ನು ಪ್ರತಿಭಟಿಸುವುದರ ಮೂಲಕ ತಡೆಯುತ್ತಾಳೆ. ಸಾಂತ್ವನವನ್ನು ಹೇಳಲು ಬಂದ ಯುವಕ ಸಂಘದ ಯುವಕರನ್ನು ಯಾರಾದರೂ ಸರಿ ತನ್ನ ಮಗಳನ್ನು ಲಗ್ನವಾಗಲು ಹೇಳುತ್ತಾಳೆ. ಉನ್ನಿಸಾಳನ್ನು ಲಗ್ನವಾಗಲೂ ಯಾರೂ ಮುಂದೆ ಬರದಿರುವುದು ರುಖಿಯಾಬಿಯ ಪ್ರತಿಭಟನೆಗೆ ಕಾರಣವಾಗುತ್ತದೆ. ಸ್ತ್ರೀ ಶೋಷಣೆಯ ಗಾಢವಾದ ಪ್ರಭಾವ ಕಥೆಯಲ್ಲಿ ವ್ಯಕ್ತವಾಗಿದೆ.

ಮುಸ್ಲಿಂ ಸಮಾಜದಲ್ಲಿ ಹೆಣ್ಣು ಪ್ರತಿಭಟಿಸುತ್ತಿರವುದರ ಪ್ರಬಲ ಸಂಕೇತ ಇದು. ಇದನ್ನು ಯಾವ ಗಂಡು ತಡೆಯಲು ಸಾಧ್ಯವಿಲ್ಲ. ಹೆಣ್ಣು ಮಾರಿಯಾದಾಗ ಉಂಟಾಗುವ ಕ್ರಾಂತಿಯನ್ನು ಈ ಕಥೆ ವ್ಯಕ್ತಪಡಿಸುತ್ತದೆ. "ಮುತ್ತುಚ್ಚೇರ ಬೊಳುವಾರರ ಉತ್ಕೃಷ್ಟ ರಚನೆ ಮುಸ್ಲಿಂ ಹೆಣ್ಣುಮಕ್ಕಳನ್ನು

ಅರಬರು ಕೊಂಡುಕೊಳ್ಳುವ ಕಥೆಯನ್ನು ಇಲ್ಲಿ ಹೇಳಿದ್ದಾರೆ. ನಾವು ಈ ಶತಮಾನದ ಪ್ರಜೆಗಳಾಗಿ ಕೇಳಬಲ್ಲ ಗುಲಾಮಿ ಸಂಸ್ಕೃತಿಯ ನವೀನ ರೂಪದಲ್ಲಿ ಜಾರಿಯಲ್ಲಿರುವುದನ್ನು ಈ ಕಥೆ ಹೇಳುತ್ತದೆ"[೧೦]

ಹೀಗೆ ಹೆಣ್ಣು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮತ್ತು ಬಡತನದ ಕಾರಣದಿಂದ ಶೋಷಣೆಗೆ ಕಾರಣವಾಗಿದೆ. ಆರ್ಥಿಕ, ಸಾಮಾಜಿಕ ಪರಿಸ್ಥಿತಿ, ಭಾರತೀಯ ಮುಸ್ಲಿಂ ಸಮಾಜದಲ್ಲಿ ಅಲ್ಲಲ್ಲಿ ಇನ್ನು ಗುಲಾಮಿ ಪದ್ಧತಿ ಜೀವಂತವಾಗಿರುವುದನ್ನು ಡಾ. ಹನುಮಂತಯ್ಯ ಸಮರ್ಥನೆ ಮಾಡಿದ್ದಾರೆ.

**ಸಾರಾ ಅಬೂಬಕ್ಕರ್ (೧೯೩೬) :**

ಮುಸ್ಲಿಂ ಮಹಿಳೆಯೊಬ್ಬಳು ಕನ್ನಡ ಸಾಹಿತ್ಯ ಯಾತ್ರೆಯಲ್ಲಿ ಹೊಸ ಕೈಗಂಬವಾಗಿ, ದಿಟ್ಟತನಕ್ಕೆ ಹೆಸರಾಗಿ 'ಚಂದ್ರಗಿರಿಯ ತೀರದಲ್ಲಿ' ಎಂಬ ಮೊದಲ ಕಾದಂಬರಿಯ ಮೂಲಕ ಕನ್ನಡ ಸಾಹಿತ್ಯವನ್ನು ಪ್ರವೇಶಿಸಿದ್ದು ಶ್ರೀಮತಿ ಸಾರಾ ಅಬೂಬಕ್ಕರ್ ಇವರು ಪ್ರಾರಂಭದಲ್ಲಿಯೆ ಪ್ರಸಿದ್ಧಿಯನ್ನು ಪಡೆದ ಪ್ರಥಮ ಮುಸ್ಲಿಂ ಮಹಿಳೆಯಾಗಿದ್ದಾರೆ.

ಕರ್ನಾಟಕದ ಭಾಗವಾಗಿದ್ದ ಇಂದಿನ ಕಾಸರಗೋಡು ಇವರ ಹುಟ್ಟೂರು. ೧೯೩೬ ತಂದೆ ಪಿ. ಅಹಮ್ಮದ್ ಪ್ರಖ್ಯಾತ ವಕೀಲರು. ತಾಯಿ ಜೈನಾಬಿ. ನಡು ವಯಸ್ಸಿನಲ್ಲಿ ತಮ್ಮ ಅನುಭವಗಳನ್ನು ಪಕ್ವವಾಗಿಸಿಕೊಂಡು ಮುಸ್ಲಿಂ ಮಹಿಳೆಯರ ಅನುಭವಗಳನ್ನು ಬರೆಯತೊಡಗಿದರು. ಒಂದು ಕಾಲಕ್ಕೆ ತೀರಾ ದೂರವಾಗಿಯೇ ಉಳಿದಿದ್ದ ಮುಸ್ಲಿಂ ಸಮಾಜದ ಸಾಮಾಜಿಕ ಕಟ್ಟಳೆಗಳನ್ನು ಮೀರಿ ಪ್ರತಿಭಟಿಸಲು ಮುಂದಾದ ಸಾರಾ ಅವರು ತಮ್ಮ ಸಮಾಜದ ಎಲ್ಲ ಒಳಹೊರಗಿನ ಸಮಸ್ಯೆಗಳನ್ನು ಇಡಿಯಾಗಿ ವಿಶ್ಲೇಷಿಸಿ ಅಲ್ಲಿನ ದೋಷಗಳನ್ನು ಸಾಹಿತ್ಯದ ಮೂಲಕ ತೆರೆದಿಟ್ಟಿದ್ದಾರೆ. ಇವರ ಸಾಹಿತ್ಯ ಸೇವೆಯು ಆರೋಗ್ಯಕರ ಸಮಾಜಕ್ಕೆ ಅರ್ಪಿಸುತ್ತಿರುವ ಅನನ್ಯವಾದ ಕೊಡುಗೆಯಾಗಿದೆ.

ಸಾರಾ ಅವರಿಗಿರುವ ಕಳಕಳಿಯೇನೆಂದರೆ ಇಸ್ಲಾಂ ಧರ್ಮವನ್ನು ತಪ್ಪಾಗಿ ಅರ್ಥೈಸಿಕೊಂಡು ಶೋಷಣೆಗೆ ಒಳಗಾಗುತ್ತಿರುವ ತಮ್ಮ ಸಮಾಜದಲ್ಲಿನ ಮಹಿಳೆಯರಾಗಲೀ ಅಥವಾ ಪುರುಷರಾಗಲೀ ಅವರ ಕಲ್ಯಾಣವಾಗಬೇಕಾದರೆ ಮುಸ್ಲಿಂ ಸಮಾಜದ ಸ್ತ್ರೀ-ಪುರುಷರೆಲ್ಲರೂ ವಿದ್ಯಾವಂತರಾಗಬೇಕು. ಮತ್ತು ಧರ್ಮ ಗ್ರಂಥಗಳ ಸರಿಯಾದ ಅಧ್ಯಯನ ಮಾಡಬೇಕು. ಕೇವಲ ಕುರಾನ್ ಶ್ಲೋಕಗಳನ್ನು ಅರ್ಥೈಸಿಕೊಂಡರೆ ಸಾಲದು, ಅದರ ಮೂಲ ಉದ್ದೇಶವನ್ನು ಅರ್ಥಮಾಡಿಕೊಳ್ಳಬೇಕು ಎನ್ನುವ ತಮ್ಮ ಮಹತ್ವಕಾಂಕ್ಷೆಯ ಅನುಭವವನ್ನು ಕಥೆ, ಕಾದಂಬರಿಗಳಲ್ಲಿ ಪ್ರತಿಬಿಂಬಿಸಿದ್ದಾರೆ.

ಬೊಳುವಾರು ಅವರ 'ಇದ್ದತ್', ಕಟ್ಪಾಡಿಯವರ 'ಜುಲೇಖಾ', ಅಬ್ದುಲ್ ರಶೀದ್‌ರ 'ಕಪ್ಪು ಹುಡುಗನ ಹಾಡು', ಸಾರಾ ಅವರ 'ಚಪ್ಪಲಿಗಳು' ಮತ್ತು ಬಾನು ಅವರ 'ಶಾಹಿಲ ಎಂಬ ಕನ್ಯೆಯ ಕತೆ' ಈ ಐದು ಕತೆಗಳನ್ನು ಪ್ರಾತಿನಿಧಿಕವಾಗಿಟ್ಟುಕೊಂಡು ಇವುಗಳ ಪರಿಶೀಲನೆಯ ಮೂಲಕ ಮುಸ್ಲಿಂ ಸಮಾಜದ ಸ್ವರೂಪವನ್ನು ಅದರ ಒಳನೋಟಗಳನ್ನು ನೋಡಬಹುದಾಗಿದೆ.

ಬೊಳುವಾರು ಅವರು ತಮ್ಮ ಅನೇಕ ಕತೆಗಳಲ್ಲಿ ಮಹಿಳಾ ಪಾತ್ರಗಳನ್ನು ನೈಜ ರೀತಿಯಲ್ಲಿ ಚಿತ್ರಿಸಿದ್ದಾರೆ. 'ಇದ್ದತ್' ಕತೆಯ ನಾಯಕಿ ಮೆಹರುನ್ನೀಸಾ ಪಡುವ ಯಾತನೆಯನ್ನು ಇಲ್ಲಿ ಲೇಖಕರು ಪರಿಣಾಮಕಾರಿಯಾಗಿ ವಿಶ್ಲೇಷಿಸಿದ್ದಾರೆ. 'ಇದ್ದತ್' ಎಂದರೆ ಲೆಕ್ಕ ಎಂದು ಅರ್ಥವುಂಟು. ವಿಧವೆ ತಲಾಖ್ ಪಡೆದ ಮಹಿಳೆಯು ಮದುವೆಯಾಗುವ ಮುನ್ನ ನಾಲ್ಕು ತಿಂಗಳು ಹತ್ತು ದಿನಗಳ 'ಇದ್ದತ್' ಅವಧಿಯನ್ನು ಕಳೆಯಬೇಕಾಗುತ್ತದೆ. ಆಗ ಅವರು ಸಾಮಾನ್ಯವಾಗಿ ಕುರಾನ್ ಗ್ರಂಥ ಪಠಣಮಾಡುತ್ತಾ ತಮ್ಮ ಅವಧಿಯನ್ನು ಕಳೆಯುತ್ತಾರೆ.

ಕಡು ಬಡತನದಲ್ಲಿ ಮಲತಾಯಿ ಆಸರೆಯಲ್ಲಿ ಬೆಳೆದ ಮೆಹರುನ್ನೀಸಾ ಬಡತನದ ಕಾರಣದಿಂದ ತನ್ನ ತಂದೆಯ ವಯಸ್ಸಿನ ಮುತ್ತಬ್ಬ ಸಾಹುಕಾರನನ್ನು ಮದುವೆಯಾಗುವುದು, ದಾಂಪತ್ಯ ಸುಖದಿಂದ ವಂಚಿತಳಾಗಿ ನರಳುವುದು, ಅದೇ ಮನೆಯಲ್ಲಿ ಕೆಲಸಕ್ಕೆ ಹದಿಹರೆಯದ ಯುವಕ 'ಸಮದ್'ನೊಂದಿಗೆ ಮಾನಸಿಕವಾಗಿ ಸಂಬಂಧವನ್ನು ಕಲ್ಪಿಸಿಕೊಳ್ಳುವುದು, ಮುತ್ತಬ್ಬ ಸಾಹುಕಾರ ತೀರಿಕೊಂಡ ನಂತರ ತನ್ನ 'ಇದ್ದತ್' ಅವಧಿಯಲ್ಲಿ 'ಸಮದ್'ನ ಕನಸು ಕಾಣುವುದು, 'ಇದ್ದತ್' ಮುಗಿದ ನಂತರ ಹೊಸ ಬದುಕಿನ ಸಂಭ್ರಮಿಸುವ ಮೆಹರುನ್ನೀಸಾಳಿಗೆ 'ಸಮದ್' ಬೇರೆ ಕಡೆ ಹೆಣ್ಣು ನೋಡಲು ಸಿದ್ಧತೆ ನಡೆದಿರುವುದು ತಿಳಿದು ನಿರಾಶೆ ಹೊಂದುವಲ್ಲಿ ಕಥೆ ಕೊನೆಗೊಳ್ಳುತ್ತದೆ.

ಇಲ್ಲಿ ಮೆಹರುನ್ನೀಸಾ ಕೇವಲ ನಾಲ್ಕು ತಿಂಗಳ ಹತ್ತು ದಿನಗಳ 'ಇದ್ದತ್' ಅವಧಿಯಲ್ಲಿ ಮಾತ್ರ ನಿರಾಶಳಾಗದೆ ಇಡೀ ಬದುಕನ್ನೇ ನೋವಿನಲ್ಲಿ ಕಳೆಯುತ್ತಾಳೆ. ಇವಳ ಪಾಲಿಗೆ ಇದ್ದತ್ ಜೀವನವಿಡಿ ಅನ್ವಯವಾಗುತ್ತದೆ. ಮುದುಕ ಗಂಡ ಸತ್ತಮೇಲೂ ಎಲ್ಲ ಸುಖಗಳು ಅವನಿಗೆ ಸಿಗಲಿ ಎಂದು ಪ್ರಾರ್ಥಿಸುವ ಮುಗ್ಧೆ ಮೆಹರುನ್ನೀಸಾಳಂತಹ ಪಾತ್ರಗಳು ವಿರಳವೆನ್ನಬಹುದು. 'ಸಮದ್' ಬೇರೆ ಹುಡುಗಿಯೊಡನೆ ನಿಕಾಹ್ ಮಾಡಿಕೊಳ್ಳುವ ವಿಷಯ ತಿಳಿದು ಅಲ್ಲಾಹುವನ್ನು ಅವಳು ಈ ರೀತಿ ಪ್ರಾರ್ಥಿಸುತ್ತಾಳೆ. "ಓಹ್...ಅಲ್ಲಾಹುವೇ, ಕಾದು ಕೆಂಪು ಚರ್ಮದಂತಾದ ಆಗಸವನ್ನು ಪಾಪಿಯಾದ ತನ್ನ ಮೇಲೆ ಬೀಳಿಸು, ಕುದಿಯುವ ನೀರಿನಲ್ಲಿ ನನ್ನನ್ನು ನಡೆಸು. ಸುಡುವ ಕರಗಿದ ತಾಮ್ರವನ್ನು ನನ್ನ ಮೇಲೆ ಸುರಿದುಬಿಡು"[೧೧] ಎನ್ನುವ ಆಕೆಯ ನುಡಿಗಳು ಓದುಗರಲ್ಲಿ ತೀವ್ರ ಪರಿಣಾಮವನ್ನುಂಟು ಮಾಡುತ್ತವೆ. ಮೆಹರುನ್ನೀಸಾಳಂತಹ ಮಹಿಳೆಯರು

ತಾವು ಯಾವ ತಪ್ಪು ಮಾಡದಿದ್ದರೂ ಒಂದು ಪರಿಸ್ಥಿತಿಯ ಚೌಕಟ್ಟಿನೊಳಗೆ ಸಿಕ್ಕು ನರಳುವ ಸ್ಥಿತಿ ಮನಮಿಡಿಯುವಂತಿದೆ.

ಕಟ್ಪಾಡಿಯವರ 'ಜುಲೇಖ' ಕತೆಯಲ್ಲಿನ ಕಥಾನಾಯಕಿ ಜುಲೇಖ ಪಡುವ ಕಷ್ಟವೂ, ಮೆಹರುನ್ನೀಸಾಳಷ್ಟೇ ತೀವ್ರತರವಾದುದು. ಅಕ್ಬರನನ್ನು ಮದುವೆಯಾಗಿ ಅವನ ಸಾಂಪ್ರದಾಯಿಕ ಬದುಕಿನ ಚೌಕಟ್ಟಿನಲ್ಲಿ ತನ್ನೆಲ್ಲ ಆಸೆಗಳನ್ನು ಗಾಳಿಗೆ ತೂರಿದ ಜುಲೇಖ ಗಂಡ ಸತ್ತ ನಂತರ ಬೊಳುವಾರು 'ಇದ್ದತ್' ಕತೆಯ ಮೆಹರುನ್ನೀಸಾಳಂಥೆ ಇಲ್ಲಿಯೂ ಜುಲೇಖ 'ಇದ್ದತ್' ಮಾಡುತ್ತಾಳೆ. 'ಇದ್ದತ್' ಮುಗಿದ ನಂತರ ಇವಳ ಬಾಳಿನಲ್ಲಿ ಅಕ್ಬರನ ತಮ್ಮ ಮುನೀರ್ ಬರುತ್ತಾನೆ. ಅಕ್ಬರನಿಗಿಂತ ತುಂಬಾ ಭಿನ್ನವಾದ ಮುನೀರ್ ಜುಲೇಖಳಿಗೆ ಸ್ವಾತಂತ್ರ್ಯಕೊಟ್ಟರೂ ಪ್ರೀತಿಯನ್ನು ಕೊಡದೆ ಮತ್ತೆ ಶೋಷಣೆ ಮಾಡಲು ಪ್ರಾರಂಭಿಸುತ್ತಾನೆ. ಮೆಹರನ್ನೀಸಾ 'ಇದ್ದತ್' ನಂತರ ಸಮದ್‌ನ ಬಗೆಗೆ ಕನಸುಕಂಡು ಅವನ ಬೇರೆ ನಿಕಾಹ್ ಮಾಡಿಕೊಳ್ಳಲು ಯತ್ನಿಸಿದಾಗ ನಿರಾಶೆಯಾದರೆ, ಜುಲೇಖಳ ಇದ್ದತ್‌ದ ನಂತರ ತಾನೇ ಒಪ್ಪಿ ನಿಕಾಹ್ ಮಾಡಿಕೊಂಡ ಮುನೀರ್ ಚಿತ್ರಹಿಂಸೆ ಕೊಡುತ್ತಾನೆ. ಈ ಎರಡು ಪಾತ್ರಗಳು ನೋವಿನ ಸೆಳುವಿನಲ್ಲಿ ಸಿಕ್ಕು ತತ್ತರಿಸುತ್ತವೆ. ಅಕ್ಬರ್ ಸಾಂಪ್ರದಾಯಿಕವಾದಿಯಾಗಿದ್ದ ಹೀಗಾಗಿ ಜುಲೇಖಗಳ ಕನಸುಗಳು ಸಾಕಾರವಾಗಲಿಲ್ಲ. ಅವನ ತಮ್ಮ ಮುನೀರ್ ಸ್ವೇಚ್ಛಾಚಾರಿಯಾಗಿದ್ದ. ಹೀಗಾಗಿ ಅವನಿಂದ ನಿಜವಾದ ಪ್ರೀತಿ ಸಿಗಲಿಲ್ಲ. ಇಲ್ಲಿ ಜುಲೇಖ ಎರಡು ವಿಭಿನ್ನ ವ್ಯಕ್ತಿತ್ವಗಳನ್ನು ಹೊಂದಿದ ಇಬ್ಬರು ಸೋದರರಿಂದ ವಂಚಿತಳಾಗಿದ್ದಾಳೆ. ಅಕ್ಬರನದು ಒಂದು ರೀತಿಯ ಶೋಷಣೆಯಾದರೆ, ಮುನೀರ್‌ನದು ಮತ್ತೊಂದು ರೀತಿಯ ಶೋಷಣೆ. ಇಬ್ಬರಿಂದಲೂ ಆಕೆ ವಂಚಿತಳಾದಾಗ ಹತಾಶೆಗೊಳ್ಳುತ್ತಾಳೆ. ಇಬ್ಬರ ಮುಖಗಳೂ ನೆನಪಿಗೆ ಬರುತ್ತವೆ. "ಇಬ್ಬರ ನಗುಮುಖಗಳಲ್ಲೂ ಬರುಬರುತ್ತಾ ಉದ್ದುದ್ದದ ಕೋರೆಹಲ್ಲುಗಳು ಮೂಡತೊಡಗಿ ಕಣ್ಣುಗಳು ದೊಡ್ಡದಾಗುತ್ತಾ ಬಂದು ಕ್ರೂರವಾಗಿ ತನ್ನನ್ನು ನೋಡುತ್ತಾ ನುಂಗಲು ಬಂದಂತೆ ಕಂಡುಬಂದಂತಾಗಿ ಜುಲೇಖ ಗಡಗಡನೆ ನಡುಗಿದಳು"[೧೨] ಎಂದು ಕಟ್ಪಾಡಿ ಜುಲೇಖಳ ದುರಂತಮಯ ಬದುಕನ್ನು ತೀವ್ರತರವಾಗಿ ಮೂಡಿಸುತ್ತಾರೆ. ಧರ್ಮದಲ್ಲಿರುವ ಆಚರಣೆಗಳು, ಆ ಆಚರಣೆಗಳನ್ನು ಬಳಸಿಕೊಂಡು ಪುರುಷ ಪ್ರಧಾನ್ಯ ವ್ಯವಸ್ಥೆ ಹೆಣ್ಣನ್ನು ಯಾವ ರೀತಿ ಶೋಷಣೆ ಮಾಡುತ್ತಾರೆ ಎಂಬುದನ್ನು ಕಥೆ ಹೇಳುತ್ತದೆ.

ದಾಂಪತ್ಯ ಸುಖದಿಂದ ವಂಚಿತಳಾಗಿ ಕನಸುಗಳನ್ನು ಕಳೆದುಕೊಂಡು ನರಳುವ ಮೆಹೆರುನ್ನೀಸಾಳಿಗೂ, ಸಂಪ್ರದಾಯ ಮತ್ತು ಸ್ವೇಚ್ಛೆತೆಗಳ ನಡುವೆ ಸಿಕ್ಕು ತತ್ತರಿಸುವ ಜುಲೇಖಳಿಗೂ ಶೋಷಣೆಯ ವಿಷಯದಲ್ಲಿ ಸಾಮ್ಯತೆಯಿದೆ. ಈ ಎರಡು ಪಾತ್ರಗಳು 'ಇದ್ದತ್' ನಂತರವೇ ಬೆಳವಣಿಗೆಯಾಗುತ್ತವೆ.

ಇಬ್ಬರ ಶೋಷಣೆ ಒಂದೇಯಾದರೂ ಅದು ಕಾರ್ಯಗತವಾಗುವ ರೀತಿಯಲ್ಲಿ ವ್ಯತ್ಯಾಸವಿದೆ. ಮೆಹರುನ್ನೀಸಾಳಿಗೆ ಬಡತನ ಮತ್ತು ಪರಿಸ್ಥಿತಿ ನೋವಾಗಿ ಕಾಡಿದರೆ, ಜುಲೇಖಳಿಗೆ ಇಬ್ಬರ ಗಂಡಂದಿರೂ ದುಃಖವನ್ನುಂಟು ಮಾಡುತ್ತಾರೆ. ಮುನೀರ್ ಫಟಾರನೇ ಅವಳ ಬಾಯಿಗೆ ಹೊಡೆದಾಗ ಆ ಪೆಟ್ಟಿನ ನೋವಿಗಿಂತ ಅವನಾಡಿದ ಮಾತು ತೀವ್ರ ನೋವನ್ನುಂಟುಮಾಡಿ ಅವಳಲ್ಲಿ ಕಣ್ಣೀರು ಕೂಡ ಒಸರದಂತೆ ಮಾಡುತ್ತದೆ. ಈ ಎಲ್ಲ ನೋವುಗಳಿಂದ ಹತಾಶೆಗೊಂಡ ಜುಲೇಖಳಿಗೆ ಎಲ್ಲ ಧರ್ಮಗಳೂ ಒಂದಿಲ್ಲ ಒಂದು ರೀತಿಯಲ್ಲಿ ಹೆಣ್ಣನ್ನು ಶೋಷಿಸುತ್ತಾ ಬಂದಿವೆಯೆಂದು ಸ್ಪಷ್ಟವಾಗುತ್ತದೆ. ಆದರೆ ಅದನ್ನು ಹೇಳುವ ಧೈರ್ಯವಿಲ್ಲದೆ ಅವಳು ಬದುಕಿನುದ್ದಕ್ಕೂ ನೋವನ್ನನುಭವಿಸುತ್ತಾಳೆ.

ಅಬ್ದುಲ್ ರಶೀದ್ ಅವರ 'ಕಪ್ಪು ಹುಡುಗನ ಹಾಡು' ಕತೆಯು ಸಾರಾತಾತಾಳ ಪಾತ್ರ ತುಂಬಾ ವಿನೂತನವಾದುದು. ಹಮೀದ್ ಎನ್ನುವ ಮುಗ್ಧ ಹುಡುಗನ ಮೂಲಕ ಬಿಚ್ಚಿಕೊಳ್ಳುವ ಈ ಕತೆಯಲ್ಲಿ ಸಾರಾತಾತಾಳ ವಾತ್ಸಲ್ಯ ಮತ್ತು ಮೂಕವೇದನೆ ಮಡುಗಟ್ಟಿ ನಿಂತಿವೆ. ಸಾರಾತಾತಾ ಮತ್ತು ಕೊರಗ ಇವರ ದೈಹಿಕ ಸಂಬಂಧದಿಂದ ಹುಟ್ಟಿದ ಹಮೀದನಿಗೆ ಸಾರಾತಾತಾ ತನ್ನ ತಾಯಿಯೆಂದು ಕೊರಗ ತನ್ನ ತಂದೆಯೆಂದು ಗೊತ್ತಾದಾಗ ಅಚ್ಚರಿಯುಂಟಾಗುತ್ತದೆ. ಅವ್ಯಕ್ತ, ಆನಂದವುಂಟಾಗುತ್ತದೆ. ಮೊದಲ ಸಾರಾತಾತಾ ಹಮೀದನನ್ನು ಕಂಡಾಗ ಅಪ್ಪಿಕೊಂಡು ಮುದ್ದಾಡುವುದು, ವಾತ್ಸಲ್ಯದಿಂದ ಕಣ್ಣೀರಿಡುವುದು, ಆ ಮೂಲಕ ಹುಡುಗನಿಗೆ ಲುಂಗಿ ಕೊಡಿಸುವುದು ಈ ಎಲ್ಲ ಕ್ರಿಯೆಯಲ್ಲಿ ಸಾರಾತಾತಾಳ ಪಾತ್ರ ತುಂಬ ವಿಶಿಷ್ಟವಾಗಿ ಕಾಣುತ್ತದೆ.

ಸಾರಾ ಅಬೂಬಕರ್ ಅವರ 'ಚಪ್ಪಲಿಗಳು' ಕತೆಯ ನಾಯಕಿ ಸಮೀರಾ ಹಾಗೂ ಬಾನು ಮುಷ್ತಾಕ್ ಅವರ 'ರಾಹಿಲ' ಎಂಬ ಕನ್ಯೆಯ ಕತೆಯ ಕಥಾನಾಯಕಿ ರಾಹಿಲ ಈ ಮಹಿಳಾ ಪಾತ್ರಗಳು ಮಹಿಳಾ ಸಂವೇದನೆಯ ಸ್ವರೂಪಗಳಾಗಿವೆ. ಸಮೀರಾ ಮತ್ತು ರಾಹಿಲ ಇಬ್ಬರದೂ ಗೋಳಿನ ಕಥೆಯೇ. ಆದರೂ ಇವರಿಬ್ಬರ ನಿರಾಶೆಯ ಬದುಕಿಗೆ ಅವರ ಮನೆಯ ಸಂಪ್ರದಾಯ ಮತ್ತು ಅಲ್ಲಿಯ ಧಾರ್ಮಿಕ ಚೌಕಟ್ಟುಗಳೇ ಕಾರಣವಾಗುತ್ತವೆ. ಈ ಎರಡು ಪಾತ್ರಗಳ ಆಂತರಿಕ ನೋವು, ನಿರಾಶೆಗಳನ್ನು ಲೇಖಕಿಯರು ಪರಿಣಾಮಕಾರಿಯಾಗಿ ಹೇಳಿದ್ದಾರೆ.

ಮೆಹರುನ್ನೀಸಾ ಹಾಗೂ ಜುಲೇಖಾ ಪಾತ್ರಗಳು ಗಂಡಂದಿರಿಂದ ಶೋಷಣೆಗೊಳಗಾದರೆ, ಸಮೀರಾ ಹಾಗೂ ರಾಹಿಲ ಪಾತ್ರಗಳು ತವರುಮನೆಯವರ ಮತೀಯ ನಂಬಿಕೆಗಳಿಂದ ಸಾಂಪ್ರದಾಯಿಕ ದಾರ್ಷ್ಟ್ಯತೆಗಳಿಂದ ನೋವಿಗೀಡಾಗಿವೆ. ಸಮೀರಾಳ ತಂದೆ ಹಸನ ಬ್ಯಾರಿಯ ಒಣದರ್ಪ ಮೌಢ್ಯಗಳಿಂದ ಸಮೀರಾಳ ಬದುಕು ಬರುಡಾದರೆ, ರಾಹೀಲಳ ಮನೆಯ ಸಾಂಪ್ರದಾಯಿಕ

ಗುಣದಿಂದ ಅವಳ ಜೀವನ ನಿರಾಶೆಯಲ್ಲಿ ಕೊನೆಗೊಳ್ಳುತ್ತದೆ. ಇಲ್ಲಿ ಸಮೀರಾಳ ಪತಿ ಸಬೀರ್ ಪ್ರಗತಿಪರನಾಗಿ ಕಂಡರೆ ಆಕೆಯ ತಂದೆ ಹಸನ ಬ್ಯಾರಿ ಆಹಂಭಾವದ ಒಣ ಪ್ರತಿಷ್ಠೆಯ ಪ್ರತೀಕವಾಗ ಕಾಣುತ್ತಾನೆ. ಹಸನ ಬ್ಯಾರಿಯ ಪತ್ನಿ ಫಾತೀಮಾ ವರ್ಷಕ್ಕೊಂದು ಮಗುವನ್ನು ಹೆರುವುದು ಅವಳ ಬಾಣಂತಿತನ ಮಾಡುವ ಕೆಲಸದಲ್ಲಿಯೇ ಮಗಳು ಸಮೀರಾ ತನ್ನ ಬದುಕನ್ನು ಕಳೆಯುವುದು, ಆ ಮೂಲಕ ಆಕೆ ಗಂಡನ ಸಾಮಿಪ್ಯದಿಂದ ದೂರಾಗಿ ಮನೋರೋಗಿಯಾಗಿ ಬಳಲುವುದು, ನಾಲ್ಕು ಗೋಡೆಗಳ ಮಧ್ಯ ಬಂಧಿಯಾಗಿ ಒದ್ದಾಡುವುದನ್ನು ಸಾರಾ ತೀವ್ರವಾಗಿ ಚಿತ್ರಿಸಿದ್ದಾರೆ. ಅದೇ ರೀತಿ ಸ್ಕೂಲ್ ಟೀಚರ್ ಆಗಿದ್ದ ರಾಹಿಲ ತನ್ನ ತಾಯಿ ಜೈನಬ್‌ಳು ನೋಡಿದ ವರ ಶೌಕತ್‌ನು ಅಂಗವಿಕಲನಾದುದರಿಂದ ಮೊದಲು ನಿರಾಕರಿಸುವುದು, ಬೇರೆ ಕಡೆ ಮದುವೆಯಾಗಲು ವರದಕ್ಷಿಣೆ ಕೊಡದಾಗದ್ದಕ್ಕೆ ಕೊನೆಗೆ ಶೌಕತ್‌ನನ್ನೇ ಮದುವೆಯಾಗಲು ನಿರ್ಧರಿಸಿದರೂ ಶೌಕತ್‌ನಿಗೆ ಬೇರೆ ಕಡೆ ನಿಕಾಹ್ ಆಗುತ್ತದೆ. ಶಿಕ್ಷಣಾಧಿಕಾರಿ ಪ್ರಸಾದ ರಾಹಿಲಳನ್ನು ಮದುವೆಯಾಗಲು ಒಪ್ಪಿದರೂ ಬೇರೆ ಜಾತಿಯ ಎಂಬ ಕಾರಣಕ್ಕಾಗಿ ಹೆದರಿ ರಾಹಿಲ ಆ ಸಂಬಂಧವನ್ನು ತಿರಸ್ಕರಿಸುತ್ತಾಳೆ. ಪ್ರಸಾದನ ಮದುವೆಯೂ ಬೇರೆಯವರೊಂದಿಗೆ ಆಗುತ್ತದೆ. ಹೀಗೆ ತನ್ನ ಜಾತಿಯ ಶೌಕತ್‌ನು ಸಿಗದೆ ಬೇರೆ ಜಾತಿಯ ಪ್ರಸಾದನು ದೊರೆಯದೆ 'ರಾಹಿಲ' ತಾನು ತೆಗೆದುಕೊಂಡ ನಿರ್ಣಯಕ್ಕೆ ತಾನೇ ಕೊರಗುತ್ತಾಳೆ. ಅಲ್ಲಿಗೆ ಕತೆ ಮುಗಿಯುತ್ತದೆ. ಹೀಗೆ ಈ ಐದು ಕತೆಗಳಲ್ಲಿ ಮುಸ್ಲಿಂ ಮಹಿಳೆಯ ಕೊರಗು–ನೋವು–ನಿರಾಶೆ–ಹತಾಶೆಗಳೇ ಪ್ರಧಾನವಾಗಿವೆ. ಅಸಹಾಯಕ ಮುಸ್ಲಿಂ ಸಮಾಜದ ಮಹಿಳೆಯರ ಶೋಷಣೆ ಸಾರಾ ಹಾಗೂ ಬಾನು ಅವರ ಕಥೆಗಳ ಮುಖ್ಯ ವಸ್ತುವಾಗಿದೆ.

ಚಪ್ಪಲಿಗಳು ಕತೆಯಲ್ಲಿ ಹಸನ ಬ್ಯಾರಿ ತನ್ನ ಅಳಿಯನಿಗೆ ಹೀಗೆ ಹೇಳುತ್ತಾನೆ. "ಶಬೀರ ನೀನು ಗಂಡಸು ಏನು ಮಾಡಿದರೂ ನಡೆಯುತ್ತದೆ. ಆದರೆ ಸಮೀರ ಹೆಣ್ಣು, ಆಕೆಗೆ ಇಂತಹದೆಲ್ಲಾ ರುಚಿ ಹತ್ತಿದರೆ ಅವಳ ಬುದ್ಧಿ ಹಾಳಾಗುತ್ತದೆ. ಹೆಂಗಸರನ್ನು ಕಾಲಿನ ಚಪ್ಪಲಿಯಂತೆ ಬಳಸಿಕೊಳ್ಳಬೇಕು. ಬೇಕಾದಾಗ ಉಪಯೋಗಿಸಿ, ಬೇಡವಾದಾಗ ಮೂಲೆಯಲ್ಲಿ ಬಿಟ್ಟುಬಿಡಬೇಕು. ಅದು ಬಿಟ್ಟು ತಲೆಯ ಮೇಲಿಟ್ಟುಕೊಂಡರೆ ಹೇಗೆ? ಚಪ್ಪಲಿಯನ್ನು ಎಲ್ಲಿಡಬೇಕೋ ಅಲ್ಲೇ ಇಡಬೇಕು"[೧೩] ಹೀಗೆ ಮಾತನಾಡುವ ಹಸನ ಬ್ಯಾರಿ ಮುಸ್ಲಿಂ ಸಂಪ್ರದಾಯವಾದಿ ಜನತೆಯ ಸಂಕೇತವಾಗಿದ್ದಾನೆ. ಅನೇಕ ಕತೆಗಳಲ್ಲಿ ಅತ್ತೆ–ಮಾವ–ಗಂಡಂದಿರಿಂದ ಶೋಷಣೆ ನಡೆದಿದ್ದರೆ ಸಾರಾ ಅವರ ಈ 'ಚಪ್ಪಲಿಗಳು' ಕತೆಯಲ್ಲಿ ಹೆತ್ತ ತಾಯಿಯಿಂದಲೇ ಶೋಷಣೆ ನಡೆದಿರುವುದನ್ನು ಕಾಣಬಹುದಾಗಿದೆ. ಸಾರಾ ಅಬೂಬಕ್ಕರ್ ಮತ್ತು ಬಾನು ಮುಷ್ತಾಕ್ ಅವರು ತಮ್ಮ ಅನೇಕ ಕತೆಗಳಲ್ಲಿ ಇಂತಹ ಅಸಹಾಯಕ ಮಹಿಳೆಯರ ಪಾತ್ರಗಳನ್ನು ತೀವ್ರತರವಾಗಿ ಚಿತ್ರಿಸಿದ್ದಾರೆ.

ಕಟ್ಪಾಡಿಯವರು ಮುಸ್ಲಿಂ ಸಂಸ್ಕೃತಿಯ ಕೌಟುಂಬಿಕ ಚೌಕಟ್ಟಿನಲ್ಲಿಯೇ ಮಹಿಳಾ ಪಾತ್ರಗಳನ್ನು ಸೃಷ್ಟಿಸಿದರೆ ಬೊಳುವಾರು ಅವರು ವಿನೋದದ ಶೈಲಿಯಲ್ಲಿಯೇ ವೈಚಾರಿಕವಾಗಿ ನೋಡಲು ಪ್ರಯತ್ನಿಸುತ್ತಾರೆ. ಅಬ್ದುಲ್ ರಶೀದ್ ಇವರೆಲ್ಲರಿಗಿಂತ ಭಿನ್ನವಾಗಿ ಕತೆಗಳಲ್ಲಿ ಕಾವ್ಯವನ್ನು ಪೋಣಿಸುತ್ತ ಬದುಕಿನ ಸೂಕ್ಷ್ಮತೆಗಳತ್ತ ಮುಗ್ಧತೆಗಳತ್ತ ಹೆಚ್ಚು ಗಮನ ಕೊಡುತ್ತಾರೆ.

ಈ ಐದು ಕತೆಗಳಲ್ಲದೆ ಇನ್ನೂ ಅನೇಕ ಕತೆಗಳಲ್ಲಿ ಮುಸ್ಲಿಂ ಮಹಿಳೆ ವಿವಿಧ ರೂಪ ಧರಿಸಿ ನಿಂತಿದ್ದಾಳೆ. ಬೊಳುವಾರು ಅವರ ಸೈತಾನ, ರುಖಿಯಾ, ಮುತ್ತುಚ್ಛೇರದಂತಹ ಕತೆಗಳು ಮಹಿಳೆಯ ವಿವಿಧ ಮುಖಗಳನ್ನು ಪರಿಚಯಿಸಿದರೆ, ಕಟ್ಪಾಡಿಯವರ ವೈಯಕ್ತಿಕ, ಮುಸುಕು, ಅಕ್ಕನ ಮದುವೆ ಮತ್ತು ಆಡು ಇಂತಹ ಕತೆಗಳು ಮುಸ್ಲಿಂ ಮಹಿಳೆಯ ಇತರ ಜಲ್ವಂತ ಸಮಸ್ಯೆಗಳನ್ನು ಎತ್ತಿ ಹೇಳುವಲ್ಲಿ ಯಶಸ್ವಿಯಾಗುತ್ತದೆ. ತಲಾಖ್ ಹೇಗೆ ಧರ್ಮದ ಹೆಸರಿನಲ್ಲಿ ಮಹಿಳೆಯರ ಶೋಷಣೆಗೆ ಕಾರಣವಾಗಿದೆಯೆಂಬುದನ್ನು ವೈಯಕ್ತಿಕ ಕತೆ ಹೇಳಿದರೆ, ಮುಸ್ಲಿಂ ಮಹಿಳೆಯರು ಹಾಕಿಕೊಳ್ಳುವ ಬುರ್ಖಾ ಅವರ ಬದುಕಿಗೆ ಹೇಗೆ ಮುಸುಕಾಗಿದೆಯೆಂಬುದನ್ನು 'ಮುಸುಕು' ಕತೆಯಲ್ಲಿ ವಿವರಿಸಲಾಗಿದೆ. ಮುಸ್ಲಿಂ ಗಂಡಸರು ತಮ್ಮ ಸ್ವಾರ್ಥಕ್ಕಾಗಿ ಬುರ್ಖಾ ಪದ್ಧತಿಯನ್ನು ಧರ್ಮದ ಹೆಸರಿನಲ್ಲಿ ಇಂದಿಗೂ ಜೀವಂತವಾಗಿಟ್ಟಿರುವುದು ಅದರಿಂದ ಆ ಮಹಿಳೆಯರಿಗೆ ಅದು ಹೇಗೆ ಸಮಸ್ಯೆಯಾಗಿ ಕಾಡುತ್ತದೆಂಬುದನ್ನು ಕಟ್ಪಾಡಿಯವರು ಅನೇಕ ಪ್ರಸಂಗಗಳ ಮೂಲಕ ಕತೆಗಳಲ್ಲಿ ವಿಶ್ಲೇಷಿಸಿದ್ದಾರೆ.

ಇಲ್ಲಿ ಮುಸ್ಲಿಂ ಮಹಿಳೆಯನ್ನು ಆ ಸಮಾಜ ನೋಡುವ ದೃಷ್ಟಿಕೋನ ಎಂತಹದ್ದೆಂಬುದು ಸ್ಪಷ್ಟವಾಗುತ್ತದೆ. "ಅಯ್ಯೋ... ಅದೆಲ್ಲಾ ಬಿಡೇ ಮೈ ಮುನಾ, ನಾವು ಈ ಲೋಕದಲ್ಲೂ ಅನುಭವಿಸೋದು ನರಕವೇ...ನಾಳೆ ಸತ್ತ ನಂತರದಲ್ಲಿ ನರಕವೇ..." (ಕಟ್ಪಾಡಿ...ನೋಂಬು, ಪು–೧೦೦, ಮುಸುಕು) "ಏನ್ಮಾಡೋದು ಮಗ ನಮ್ಮದು ಹೆಣ್ಣು ಜನ್ಮ ಒಂದು ಮಣ್ಣಿನ ಮಡಿಕೆಯಂತರ ಒಡೀದಂತೆ ಜಾಗ್ರತೆ ಇರಬೇಕು" (ಕಟ್ಪಾಡಿ 'ನೋಂಬು, ಪು–೧೦೪) ಮುಸ್ಲಿಂ ಹೆಣ್ಣು ಒಂದು ರೀತಿಯ ಮಡಿಕೆಯಂತೆ ಇಲ್ಲಿ ಭಾಸವಾಗಿದ್ದಾಳೆ. ಪ್ರಾಣಿಯ ಹಾಗೆ ಕಂಡಿದ್ದಾಳೆ. ಆಕೆಗೆ ತನ್ನದೇ ಆದ ಕನಸುಗಳಿದ್ದರೂ, ಭಾವನೆಗಳಿದ್ದರೂ, ಸಂವೇದನೆಗಳಿದ್ದರೂ ಅವುಗಳನ್ನು ಹೊರಗೆಡುಹಲು ಸಾಧ್ಯವಾಗುತ್ತಿಲ್ಲ.

ಮುಸ್ಲಿಂ ಬದುಕನ್ನು ಕುರಿತು ಕೆಲವು ಕಾದಂಬರಿಗಳಿದ್ದರೆ, ಮುಸ್ಲಿಂ ಪಾತ್ರಗಳನ್ನು ಉಲ್ಲೇಖಿಸಿದ ಅನೇಕ ಕಾದಂಬರಿಗಳಿವೆ. ಆದರೆ ಮುಸ್ಲಿಂ ಮಹಿಳೆಯರ ಬದುಕಿನ ಒಳನೋಟವನ್ನು ಬಿಡಿಸಿ ಹೇಳುವ ಅವರ ಬದುಕನ್ನು ಕುರಿತು ಹೇಳುವ ಕಾದಂಬರಿಗಳು ಕೆಲವು ಮಾತ್ರ ಇವೆ. ಸಾರಾ

ಅಬೂಬಕ್ಕರ ಅವರ "ಚಂದ್ರಗಿರಿಯ ತೀರದಲ್ಲಿ" ಮತ್ತು 'ಸಹನಾ' ಬೊಳುವಾರ ಮುಹಮದ್ ಕುಂಞ ಇವರ "ಜೆಹಾದ್" ಮತ್ತು ಫಕೀರ್ ಮುಹಮದ್ ಕಟ್ಪಾಡಿ ಅವರ "ಸರಕುಗಳು" ಮತ್ತು 'ಕಚ್ಚಾದ' ಕಾದಂಬರಿಗಳ ಮೂಲಕ ಇಲ್ಲಿ ಮುಸ್ಲಿಂ ಪಾತ್ರಗಳು ಬದುಕಿನ ಒಳನೋಟಗಳನ್ನು ಗಮನಿಸಬಹುದಾಗಿದೆ. ಇಲ್ಲಿ ಕಟ್ಪಾಡಿಯವರು ಮಾತ್ರ ಮುಸ್ಲಿಂ ಬದುಕನ್ನು ಬೇರೆ ಸಂಸ್ಕೃತಿಯ ನೆಲೆಗಳ ಮೂಲಕ ಗುರುತಿಸಲು ಪ್ರಯತ್ನಿಸಿದ್ದಾರೆ. ಸಾರಾ ಕಾದಂಬರಿಗಳಲ್ಲಿ ಕೇವಲ ಮುಸ್ಲಿಂ ಜನಾಂಗದ ನೋವು-ನಲಿವಿನ ಚಿತ್ರಣವಿದ್ದರೆ, ಕಟ್ಪಾಡಿಯವರು ತಮ್ಮ ಕಾದಬರಿಯಲ್ಲಿ ಹಾಜಿಮಾ, ಕಚ್ಚಾದ, ಪದ್ಮ ಕೂರಗಪ್ಪ, ಬಾಬು ಪೂಜಾರಿಯಂತಹ ಹಿಂದೂ-ಮುಸ್ಲಿಂ ಜನಾಂಗದ ಪಾತ್ರಗಳನ್ನು ತಂದಿದ್ದಾರೆ.

"ಚಂದ್ರಗಿರಿಯ ತೀರದಲ್ಲಿ" ಕಾದಂಬರಿಯಲ್ಲಿ ಬರುವ ಚಂದ್ರಗಿರಿ ನದಿ ಬದುಕಿನ ಸಾವು-ನೋವುಗಳ ಸಂಕೇತವಾಗಿದೆ. ಕಿಳಿಯಾರು ಮತ್ತು ಕಾವಳ್ಳಿಯ ನಡುವೆ ದುಮ್ಮುಕ್ಕಿ ಹರಿಯುವ ಈ ನದಿ ಆ ಜನತೆಯ ಜೀವನದ ಪ್ರೀತಿಯ ಪ್ರವಾಹವಾಗಿ ಒಮ್ಮೆ ಹರಿದರೆ, ಮತ್ತೊಮ್ಮೆ ಅಲ್ಲಿಯ ಜನತೆಯ ಸಣ್ಣತನ, ಮೌಢ್ಯತೆಗಳನ್ನು ಅರಗಿಸಿಕೊಳ್ಳಲಾದರೆ ನಾದಿರಾಳಂತಹ ಮುಗ್ಧೆಯನ್ನು ಕೊಚ್ಚಿಕೊಂಡು ಹೋಗುತ್ತದೆ.

ಈ ಕಾದಂಬರಿಯ ನಾಯಕಿ ನಾದಿರಾಳ ತಂದೆ ಮಹಮದ್‌ಖಾನ್ ಮತ್ತು ಆಕೆಯ ಗಂಡ ರಶೀದ್ ಇವರ ವೈಮನಸ್ಸಿನಿಂದ ಉಂಟಾದ ಸೇಡಿನ ಕಿಡಿ ನಾದಿರಾಳ ಬದುಕನ್ನೇ ಬಲಿ ತೆಗೆದುಕೊಳ್ಳುತ್ತದೆ. "ಏನಾಯಿತೂಂತ ಕೇಳುತ್ತೀಯ? ಲಕ್ಷಣವಾಗಿ ಅಳಿಯನ ಬಳಿಹೋಗಿ ಮಗಳ ಮದುವೆಗೆ ಒಂದಿಷ್ಟು ಸಹಾಯಮಾಡು ಎಂದರೆ 'ನಾನೇನು ಬ್ಯಾಂಕ್ ಇಟ್ಟಿದ್ದೇನೆಯೇ' ಎಂದು ನನ್ನ ಮುಖದ ಮೇಲೆ ಹೊಡೆಯುವಂತೆ ಹೇಳಿಬಿಟ್ಟನಲ್ಲ ನಿನ್ನ ಅಳಿಯ? ನಾನು ಇವನಿಗೆ ಮಗಳನ್ನಲ್ಲದೆ ಎರಡು ಸಾವಿರ ರೂಪಾಯಿಗಳನ್ನು ಕೊಟ್ಟಿಲ್ಲವೆ? ನನ್ನ ಕಷ್ಟಕಾಗದ ಮೇಲೆ ಅಂತಹ ಅಳಿಯ ಇದ್ದರೇನು ಇಲ್ಲದಿದ್ದರೇನು? ಅವಳೇನಾದರೂ ಇಲ್ಲಿಂದ ಹೋಗುವ ಮಾತನ್ನು ನೀನಾಗಲಿ, ಅವಳಾಗಲಿ ಅಂದರೆ ನಿಮ್ಮಿಬ್ಬರನ್ನೂ ಒಟ್ಟಿಗೆ ಇಲ್ಲವಾಗಿಸುತ್ತೇನೆ ಚೆನ್ನಾಗಿ ನೆನಪಿಟ್ಟುಕೊಳ್ಳಿ"[೧೪] ಎಂದು ಹೇಳುತ್ತಾನೆ.

"ಇಸ್ಲಾಂ ಧರ್ಮದಲ್ಲಿ ಹೆಣ್ಣುಮಕ್ಕಳಿಗೂ ಆಸ್ತಿಯಲ್ಲಿ ಗಂಡುಮಕ್ಕಳ ಅರ್ಧಪಾಲಿದೆ. ಈ ಧರ್ಮದಲ್ಲಿ ವರದಕ್ಷಿಣೆ ಎಂಬ ಪದವೇ ಇಲ್ಲ. ಅಲ್ಲಿರುವುದು ಗಂಡು ಹೆಣ್ಣಿಗೆ ಕೊಡಬೇಕಾಗಿರುವುದು ಕನ್ಯಾಶುಲ್ಕ. ಇದನ್ನು ಹೆಣ್ಣಿಗೆ ನೀಡದೆ ಆಕೆಯ ಮೈಮುಟ್ಟಬಾರದು ಎಂಬುದು ಖುರಾನ್ ವಾಕ್ಯ. ವಿವಾಹವಾದಂದಿನಿಂದಲೂ ಆಕೆಯ ಎಲ್ಲ ಖರ್ಚು-ವೆಚ್ಚಗಳನ್ನು ಆ ಗಂಡನೇ ವಹಿಸಬೇಕೆಂದು

ಮಹಮ್ಮದ್ ಪೈಗಂಬರರು ಬೋಧಿಸಿದ್ದಾರೆ. ಆದರೆ ಪುರುಷರಿಗೆ ಲಾಭವಾಗುವಂತಹ ಪದ್ಧತಿಗಳಿದ್ದರೆ ಆಗ ಖುರಾನ್ ವಾಕ್ಯಗಳೆಲ್ಲ ಗೌಣವಾಗುತ್ತವೆ. ಇಲ್ಲಿನ ಹಿಂದೂಗಳಲ್ಲಿರುವ ಈ ವರದಕ್ಷಿಣೆಯ ಪದ್ಧತಿಯನ್ನು ಸುಲಭವಾಗಿ ತಮ್ಮ ಸಮಾಜದಲ್ಲಿ ಅಳವಡಿಸಿಕೊಂಡರು ಇಲ್ಲಿನ ಮುಸ್ಲಿಂಮರು"[೧೫]

'ಚಂದ್ರಗಿರಿಯ ತೀರದಲ್ಲಿ' ಮುಸ್ಲಿಂ ಮತೀಯ ಆಚರಣೆಗಳನ್ನು ವಿಶ್ಲೇಷಿಸುತ್ತದೆ. ಅವು ಬದುಕಿಗೆ ಅನಿವಾರ್ಯವೆ ಅಥವಾ ಅಲ್ಲವೆ ಎಂಬುದೇ ಇಲ್ಲಿನ ಪ್ರಧಾನ ಧೋರಣೆಯಾಗಿದೆ. ಸಂಸಾರಿಕವಾಗಿ ನಾದಿರಾ ಮತ್ತು ರಶೀದ್ ಇವರಲ್ಲಿ ಯಾವುದೇ ತೊಡಕು ಇಲ್ಲದಿದ್ದರೂ ಮಹಮದ್‌ಖಾನ್‌ರ ದುಡುಕು ಸ್ವಭಾವ ಹಾಗೂ ಪ್ರತಿಷ್ಠೆಯಿಂದ ರಶೀದ್ ಹೆಂಡತಿಗೆ ತಲಾಖ್ ಕೋಡುತ್ತಾನೆ. ಖುರಾನಿನಲ್ಲಿಲ್ಲದ ಸಂಪ್ರದಾಯಿಕ ಆಚರಣೆಗಳು ಹೇಗೆ ಗಂಡು ಪ್ರಧಾನವಾದ ಕೇಂದ್ರದಲ್ಲಿ ನಿಲ್ಲುತ್ತವೆ ಎಂಬುದನ್ನು ಧರ್ಮ ಗುರುವೇ ಬಹಿರಂಗಪಡಿಸುತ್ತಾನೆ. ಒಮ್ಮೆ ತಲಾಕ್ ಕೊಟ್ಟನಂತರ ಈಗ ನಾದಿರಾ ಅವನನ್ನು ಕೂಡುವಂತಿಲ್ಲ. ಮತ್ತೆ ನಿಕಾಹ್ ಮಾಡಿಕೊಳ್ಳುವುದಾದರೆ ಮತ್ತೆ ಬೇರೊಬ್ಬನೊಂದಿಗೆ ನಿಕಾಹ್ ಮಾಡಿಕೊಂಡು ಆತನೊಂದಿಗೆ ಒಂದು ರಾತ್ರಿ ಕಳೆದ ನಂತರ, ಆತ ತಲಾಕ್ ಕೊಟ್ಟನಂತರ ತನ್ನ ಮೊದಲಿನ ಗಂಡನೊಂದಿಗೆ ನಿಕಾಹ್ ಮಾಡಿಕೊಳ್ಳಬಹುದೆಂದು ಧರ್ಮ ಗುರುಗಳು ಹೇಳಿದಾಗ ನಾದಿರಾ ತತ್ತರಿಸಿ ಹೋಗುತ್ತಾಳೆ. "ಈ ಗಂಡಸರು ಹೇಳಿದಂತೆ ಒಂದು ರಾತ್ರಿ ಒಬ್ಬನ ಜೊತೆ ಕಳೆಯಲು, ಒಂದು ಹೊತ್ತು ತನ್ನ ದೇಹವನ್ನು ಒಬ್ಬನಿಗೆ ಒಪ್ಪಿಸಲು ತಾನೇನು ದನವೇ? ಹೃದಯ ಭಾವನೆಗಳೇನೂ ಇಲ್ಲದ ಒಂದು ಮೃಗ ತಾನು ಎನ್ನುವಂತೆ ಇವರು ವರ್ತಿಸುತ್ತಾರಲ್ಲ? ತನ್ನಿಂದ ಇದು ಸಾಧ್ಯವೇ ಇಲ್ಲ"[೧೬] ಎನ್ನುವ ನಿರ್ಧಾರಕ್ಕೆ ನಾದಿರಾ ಬರುತ್ತಾಳೆ. ತಲಾಕ್ ಮೂಲ ಉದ್ದೇಶವನ್ನೇ ಅರ್ಥಮಾಡಿಕೊಳ್ಳಲಾರದೆ ಮುಸ್ಲಿಂ ಪುರುಷವರ್ಗ ಅದನ್ನು ಹೇಗೆ ತನ್ನ ಶೋಷಣೆಯ ಸ್ವಾರ್ಥಕ್ಕೆ ಅಸ್ತ್ರವನ್ನಾಗಿ ಮಾಡಿಕೊಂಡಿದೆಯೆಂಬುದನ್ನು ಇಲ್ಲಿ ತೋರಿಸಲಾಗಿದೆ.

ಒಂದು ನಿಮಿಷದಲ್ಲಿ ಮೂರು ಸಲ ತಲಾಕ್ ಎಂದಾಕ್ಷಣ ಅದು ತಲಾಕ್ ಆಗಲಾರದು. ಖುರಾನ್‌ದಲ್ಲಿ ಈ ಮಾತನ್ನು ಮೂರು ಬೇರೆ ಬೇರೆ ಸಂದರ್ಭದಲ್ಲಿ ಹೇಳುವ ನಿಯಮವಿದೆ. ಮೂರು ತಿಂಗಳುಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಹೇಳುವ ತಲಾಕ್ ಎಂದರೆ ಖುರಾನ್ ಒದಗಿಸಿದ ಮೂರು ಅವಕಾಶಗಳು ಎಂದರ್ಥ. ತಲಾಕ್‌ದ ಈ ಮೂಲ ಉದ್ದೇಶವನ್ನು ಆಚರಣೆಗೆ ತರದೆ ಕೇವಲ ತಮ್ಮ ಸ್ವಾರ್ಥಕ್ಕಾಗಿ ಮುಸ್ಲಿಂ ಪುರುಷರು ಒಂದೇ ಸಮಯದಲ್ಲಿ ಮೂರು ಸಲ ತಲಾಕ್ ಹೇಳಿ ಕೈತೊಳೆದುಕೊಂಡು ಮತ್ತೊಂದು ಮದುವೆಗೆ ಸಿದ್ಧರಾಗುವುದನ್ನು ಹೀಗೆ ತಮ್ಮ ಸ್ವಾರ್ಥಕ್ಕಾಗಿ ಖುರಾನ್‌ನನ್ನು ತಮ್ಮ ಮನಸ್ಸಿಗೆ ಬಂದಂತೆ ತಿದ್ದುಪಡಿ ಮಾಡಿಕೊಂಡಿರುವುದನ್ನು ಲೇಖಕಿ ಇಲ್ಲಿ

ಸ್ಪಷ್ಟಪಡಿಸಿದ್ದಾರೆ. ಮುಸ್ಲಿಂ ಸಮಾಜದಲ್ಲಿ ಹೆಣ್ಣು ಸ್ವಾತಂತ್ರ್ಯಹೀನಳಾಗಿದ್ದಾಳೆ. ಗಂಡಿನ ಅಧೀನದಲ್ಲಿ ತನ್ನ ಆಶಯಗಳನ್ನು ಗುರುತಿಸಿಕೊಳ್ಳಬೇಕಾಗಿದೆ ಎಂಬ ನಿಷ್ಠುರ ಹಿನ್ನೆಲೆಯಲ್ಲಿ ಬರೆಯುತ್ತಾರೆ. ಖುರಾನನ್ನು ಆಧಾರವಾಗಿಟ್ಟುಕೊಂಡು ದೇವರ ಹೆಸರಿನಲ್ಲಿ, ಮತದ ಹೆಸರಿನಲ್ಲಿ ಅನೂಚವಾಗಿ ಹೆಣ್ಣನ್ನು ಶೋಷಿಸಲಾಗುತ್ತಿದೆ. 'ತಲಾಖ್'ನಂಥ ಕೆಟ್ಟ ಸಂಪ್ರದಾಯ ಆಕೆಯ ಅಸ್ತಿತ್ವವನ್ನು ಕಾಲಕಸವಾಗಿ ಮಾಡುತ್ತದೆ. ಆರ್ಥಿಕ ಸ್ವಾತಂತ್ರ್ಯವೂ ಇಲ್ಲದ ಅವಳಿಗೆ ಈ ಪದ್ಧತಿ ಎಷ್ಟು ಘೋರವಾದುದು ಎಂದು ನೆನಪಿಸಿಕೊಳ್ಳಲೂ ಕೂಡ ಭಯವಾಗುತ್ತದೆ.

'ಚಂದ್ರಗಿರಿಯ ತೀರದಲ್ಲಿ' 'ತಲಾಕ್' ಒಂದು ಸಮಸ್ಯೆಯಾಗಿ ಕಾಡಿದರೆ, 'ಸಹನಾ' ಕಾದಂಬರಿಯಲ್ಲಿ ಆ ಸಮಸ್ಯೆಯನ್ನು ಎದುರಿಸಿ ನಿಲ್ಲುವ ಬದುಕಿನ ಹೋರಾಟವಿದೆ. ಸಾರಾ ಅವರು ತಮ್ಮ ಮೊದಲ ಕಾದಂಬರಿಯಲ್ಲಿ ಸಾಧಿಸಲಾರದನ್ನು ಇಲ್ಲಿ ಸಾಧಿಸಿ ತೋರಿಸಿದ್ದಾರೆ. ಮಹಿಳೆಯ ಬದುಕಿನ ಸಮಸ್ಯೆಗೆ ಸಂಬಂಧಿಸಿದ ಕನ್ನಡದ ಒಂದು ವಿಶಿಷ್ಟ ಕಾದಂಬರಿ ಇದು.

ಸಹನಾ ಕಾದಂಬರಿಯ ನಾಯಕಿ ನಸೀಮ ಪುಸ್ತಕ ಶೀರ್ಷಿಕೆ ಸೂಚಿಸುವ ಸಹನಾ ಆಗದೆ ಆ ಸಹನೆಯನ್ನು ಮೀರಿ ಬದುಕಿನ ಹೋರಾಟದಲ್ಲಿ ತನ್ನನ್ನು ಗುರುತಿಸಿಕೊಳ್ಳುವುದರಿಂದ ಗಮನ ಸೆಳೆಯುತ್ತಾಳೆ. "ಹೆಣ್ಣು ಒಮ್ಮೆ ವಿವಾಹ ಬಂಧನದಲ್ಲಿ ಸಿಲುಕಿಕೊಂಡರೆ ಆಕೆ ಅದರಿಂದ ಪಾರಾಗುವುದು ಸಾಧ್ಯವೇ ಇಲ್ಲ. ಆದರೆ ಗಂಡಿಗೆ ಮಾತ್ರ ಯಾವ ತಡೆಯೂ ಇಲ್ಲ. ಅತಿ ಚಿಕ್ಕ ತಪ್ಪಿಗಾಗಿ ಅಥವಾ ಯಾವ ತಪ್ಪು ಮಾಡದೇ ಇದ್ದರೂ ಒಡೆದ ಮಡಕೆಯನ್ನು ಅಂಗಳಕ್ಕೆ ಎಸೆಯುವಂತೆ ಹೆಂಡತಿಯನ್ನು ಹೊರಹಾಕಿ ತಲಾಖ್ ಎಂದು ಮೂರು ಸಲ ಅಂದುಬಿಟ್ಟು ಆಕೆಯಿಂದ ಎಲ್ಲ ಬಂಧನವನ್ನು ಕಳಚಿಕೊಳ್ಳಬಹುದು. ಆದರೆ ಹೆಂಡತಿಯಾದವಳು ಮಾತ್ರ ಗಂಡನು ಎಂತಹ ತಪ್ಪು ಮಾಡಿದ್ದರೂ ಆಕೆಗೆ ಎರಡು ಮೂರು ವರ್ಷಗಳವರೆಗೆ ಅನ್ನ ಹಾಕದೇ ಹೋದರೂ ಆ ಬಂಧನದಿಂದ ಕಳಚಿಕೊಳ್ಳುವುದು ಸುಲಭ ಸಾಧ್ಯವಿಲ್ಲ, ಪುನಃ ಆತನು ಬಂದು ಕರೆದಾಗ ಆತ ತೋರುತ್ತಿರುವ ದಯೆಗಾಗಿ, ಈಗಲಾದರೂ ಆತನಿಗೆ ನೆನಪಾದುದಕ್ಕಾಗಿ ಆತನು ಒಳ್ಳೆಯತನಕ್ಕಾಗಿ ಆತನಿಗೆ ಅನಂತ ಕೃತಜ್ಞತೆಯನ್ನು ಅರ್ಪಿಸಿ ನಾಯಿಯಂತೆ ಆತನನ್ನು ಹಿಂಬಾಲಿಸುವುದು ಆಕೆಯ ಪರಮ ಕರ್ತವ್ಯ! ಆತ ಈವರೆಗೆ ಮಾಡಿದ ಎಲ್ಲ ತಪ್ಪುಗಳನ್ನು ಕ್ಷಮಿಸುತ್ತಾಳೆ. ಆಕೆ ಕ್ಷಮಾಧರಿತ್ರೀಯಲ್ಲವೇ?"[೧೭]

ಹೀಗೆ ತನ್ನೆದುರಿಗೆ ತನ್ನ ಗಂಡ ಮತ್ತೊಬ್ಬಳನ್ನು ಮದುವೆಯಾಗಿ ಕರೆತಂದಾಗ ಹುಡುಗಿಯ ತಾಯಿ "ಹೆಂಗಸರ ಬಾಳೇ ಇಷ್ಟು. ಆ ಹುಡುಗಿ ಸತ್ತ ಮೇಲೆ ಆತ ಇನ್ನೊಬ್ಬಳನ್ನು ಕಟ್ಟಿಕೊಳ್ಳಬಹುದಿತ್ತು. ಆಕೆ ತನ್ನ ರೋಗ ಸಹಿಸುವುದರ ಜೊತೆಗೆ ಆ ಮನೋವೇದನೆಯನ್ನು

ಸಹಿಸಬೇಕಾಯಿತಲ್ಲ? ಮುಚ್ಚಿದ ಬಾಗಿಲೆಡೆಯಿಂದ ತೂರಿ ಬರುವ ಕಿಲಕಿಲ ನಗುವನ್ನು ಆಕೆ ಹೇಗೆ ತಾನೇ ಸಹಿಸಿಕೊಂಡಿದ್ದಳೋ? ಆಕೆ ರೋಗಿಯಾದುದು ಆಕೆಯ ತಪ್ಪೆ? ಆಕೆಗೆ ಸರಿಯಾದ ಔಷಧಿ, ಆಹಾರ ನೀಡಿದ್ದರೆ ಆಕೆ ಬದುಕುತ್ತಿರಲಿಲ್ಲವೇ?"[೧೮] ಎಂದು ಪ್ರಶ್ನಿಸುತ್ತಾಳೆ. ಸಾವು ಬದುಕಿನ ನಡುವೆ ಸೆಣಾಸಾಡುವ ಹೆಂಡತಿಯನ್ನು ಕ್ರೂರ ಹಿಂಸೆಗೆ ದೂಡುವ ಗಂಡ ಪಶುವಾಗುತ್ತಾನೆ. ಹೀಗೆ ಈ ಎಲ್ಲಾ ಘಟನೆಗಳಿಂದ ನಸೀಮಳ ಮನಸ್ಸು ಧಗಧಗಿಸಿ ಉರಿಯತೊಡಗುತ್ತದೆ. ಅಲ್ಲಿಂದ ಸಹನೆಯ ಮುಸುಕನ್ನು ಹರಿದು ಹೊರಬರುತ್ತಾಳೆ. ಕೊನೆಯ ಹಂತದಲ್ಲಿ ಗಂಡನ ಬೆದರಿಕೆಗೆ ಬಗ್ಗದೆ ಸಮಾಜ ವ್ಯವಸ್ಥೆಯ ಅನಿಷ್ಟಗಳಿಗೆ ಕುಗ್ಗದೆ ಬಂದದ್ದನ್ನು ಎದುರಿಸಿ ಮುನ್ನಡೆಯುವ, ಭೋರ್ಗರೆಯುವ ನದಿಯಾಗುತ್ತಾಳೆ. 'ಸಹನಾ'ದ ನಸೀಮಳಂಥವರು ಗಂಡನಾಶ್ರಯವನ್ನೇ ತಿರಸ್ಕರಿಸಿ ಮಕ್ಕಳನ್ನು ಸಾಕುತ್ತಾ, ಬೀಡಿಕಟ್ಟಿ, ಬದುಕು ಕಟ್ಟಿಕೊಳ್ಳುವ ಆಶಾವಾದಿಗಳಾಗಿದ್ದಾರೆ. ಹೆಂಡತಿಯನ್ನು ನಗಣ್ಯವೆಂದು ತಿರಸ್ಕರಿಸುವ ಗಂಡಿನ ಅಹಂಕಾರಕ್ಕೆ ಪೆಟ್ಟುಕೊಟ್ಟು ಬದುಕುವ ನಸೀಮಳಂತವರೂ ಇಲ್ಲಿದ್ದಾರೆ. ಸ್ವಂತ ದುಡಿಮೆಯ ಮೇಲೆ ಬದುಕು ಕಟ್ಟಿಕೊಂಡಿದ್ದಾರೆ. ಬದುಕಿನ ಚಲನಶೀಲತೆಗೆ ಉದಾಹರಣೆಯಾಗಿದ್ದಾರೆ. ಅವಳ ಬದುಕು ಹಲವಾರು ಕಟು ಸತ್ಯಗಳನ್ನು ಹೇಳುತ್ತದೆ. ನಸೀಮಳ ಪಾತ್ರ ಹೆಣ್ಣಿನಲ್ಲಿರುವ ಅದಮ್ಯ ಚೈತನ್ಯದ ಪ್ರತೀಕ. ಬದುಕುವ ಛಲ, ಆತ್ಮಗೌರವಗಳ ಸಂಕೇತ. ನಸೀಮಳಂತಹ ಪಾತ್ರಗಳ ಮೂಲಕ ಮುಸ್ಲಿಂ ಸಮುದಾಯದಲ್ಲಿ ತಣ್ಣನೆಯ ಬಂಡಾಯಕ್ಕೆ ಲೇಖಕಿ ಪೀಠಿಕೆ ಹಾಕುತ್ತಾರೆ. ಮುಸ್ಲಿಂ ಜನಾಂಗದ ಮೌಢ್ಯ, ದರ್ಪ, ಅಹಂಕಾರ, ಅಜ್ಞಾನ, ಸಂಪ್ರದಾಯ, ಸಣ್ಣತನ, ಅನಕ್ಷರತೆಗಳಿಂದ ತುಂಬಿದೆ. ಅದನ್ನು ಇನ್ನೂ ಪರಿಣಾಮಕಾರಿಯಾಗಿ ಫಕೀರ್‌ರವರು ಚಿತ್ರಿಸಿದ್ದಾರೆ.

ಬೊಳುವಾರು ಅವರ 'ಜೆಹಾದ್' ಕಾದಂಬರಿಯಲ್ಲಿ ಹಿಂದೂ ಮತ್ತು ಮುಸ್ಲಿಂ ಸಂಸ್ಕೃತಿಯಲ್ಲಿ ಕಂಡುಬರುವ ವ್ಯತ್ಯಾಸಗಳು ಮತೀಯವಾದವು. ಬದುಕುವ ಸಂದರ್ಭಕ್ಕೆ ಅನಾವಶ್ಯಕವಾದವು. ಆಯಾ ಸಂಸ್ಕೃತಿಗಳಲ್ಲಿ ಅವು ಭಿನ್ನವಾಗಿ ನೆಲೆಯೂರಿವೆ ಅಷ್ಟೇ. ಈ ಹಿನ್ನೆಲೆಯಲ್ಲಿ ಯಾವುದು ಹೆಚ್ಚು ನಿಯಂತ್ರಣ ಸ್ವರೂಪದ್ದು ಎನ್ನುವುದಕ್ಕಿಂತ, ಬದುಕು ಪ್ರಧಾನವಾದಾಗ ಅದು ಹೇಗೆ ವರ್ತಿಸುತ್ತದೆ ಎಂಬುದೇ ಮುಖ್ಯವಾಗುತ್ತದೆ. ಎಲ್ಲ ಮತೀಯ ವಿಚಾರಗಳು ಗಂಡು ಪ್ರಧಾನವಾಗಿ ಹೆಣ್ಣನ್ನು ಅವನಿಗೆ ಅಡಿಯಾಳಾಗಿ ಮಾಡಿವೆ. 'ಜೆಹಾದ್'ನಲ್ಲಿ ಬೊಳುವಾರು ಈ ಸಮಸ್ಯೆಯನ್ನು ಚರ್ಚಿಸಲು ಪ್ರಯತ್ನಿಸಿದ್ದಾರೆ. ಮತ್ತೆ ಈ ಭೂಮಿಕೆ ಗಂಡು ಕೇಂದ್ರವಾಗಿರುವ ನೆಲೆಗೆ ಸರಿಯುತ್ತಿದೆ. ಕತೆಯ ಬೆಳವಣಿಗೆ ನಮ್ಮಲ್ಲಿ ಆ ಅಭಿಪ್ರಾಯವನ್ನು ರೂಪಿಸಲು ದುಡಿಯುತ್ತದೆ. ಆದರೆ ಸಾಂಪ್ರದಾಯಿಕವಾಗಿರುವ ಕೆಲವು ಪೂರ್ವ ನಿರ್ಧಾರಗಳು ಅದನ್ನು ವಿರೋಧಿಸುತ್ತವೆ. ರೋಸಿಯ ಒತ್ತಡದಿಂದ ತಪ್ಪಿಸಿಕೊಳ್ಳಲು ರಶೀದ್ ತಂಗಿಯನ್ನು ನೆಪಮಾಡಿಕೊಳ್ಳುತ್ತಾನೆ ಎಂದು ಮೂರ್‍ನಾಲ್ಕು

ಪಾತ್ರಗಳ ಮೂಲಕ ಕೃತಿಯು ಹೇಳಲು ಪ್ರಯತ್ನಿಸುತ್ತದೆ. ಪ್ರೀತಿ ತ್ಯಾಗದ ನಡುವೆ ಸ್ನೇಹಜೀವಿಯಾದ ಸಲೀನ ಟೀಚರ್ ಧೈರ್ಯದಿಂದ ಬದುಕಲೆತ್ನಿಸುವ ಸಲ್ಮಾ ಈ ಎರಡು ಪಾತ್ರಗಳು ಗಮನ ಸೆಳೆಯುತ್ತವೆ. ಈ ಕಥೆಯಲ್ಲಿ ಬದುಕಿನ ಹುಡುಕಾಟವಿದೆ. ವ್ಯವಸ್ಥೆಯನ್ನು ಅರ್ಥೈಸಿಕೊಳ್ಳುವ ಪ್ರಯತ್ನವಿದೆ. ಅಂತೆಯೇ ಇಲ್ಲಿ ಸೋಲು-ಗೆಲುವುಗಳಲ್ಲಿ ಮೇಲು-ಕೀಳುಗಳಲ್ಲಿ ಅರಿವಿನ ಸ್ಫೋಟವಿದೆ. ಮಾನವೀತೆಯ ಮೊರೆತವಿದೆ. ಸ್ವರ್ಗ, ನರಕ, ಸಂಪ್ರದಾಯ, ಮೌಢ್ಯತೆಗಳನ್ನು ಪ್ರಶ್ನಿಸುವ ರಶೀದ್ ಏನನ್ನೂ ಪ್ರಶ್ನಿಸದ ಸಲ್ಮಾಳಷ್ಟು ಎತ್ತರವಾಗಿ ಬೆಳೆಯದೇ ಇರುವುದನ್ನು ಹೆಚ್ಚಿನ ಕುತೂಹಲವನ್ನುಂಟು ಮಾಡುತ್ತದೆ. ತಾನು ಪ್ರಗತಿಪರ ಎಂದು ತೋರಿಸಿಕೊಂಡ ರಶೀದ್ ಸಾಧಿಸದೇ ಇದ್ದುದನ್ನು ಅವನ ತಂಗಿ ಸಲ್ಮಾ ಮೌನವಾಗಿದ್ದುಕೊಂಡೇ ಸಾಧಿಸುವುದು ಇಲ್ಲಿ ಮುಖ್ಯವಾಗುತ್ತದೆ. ನಿಜವಾದ ಬಂಡಾಯ ಬದುಕಿನ ಆಚರಣೆಯಲ್ಲಿರುತ್ತದೆಯೇ ಹೊರತು ಕೇವಲ ಭಾಷಣದಲ್ಲಿರುವುದಿಲ್ಲವೆಂಬ ಸತ್ಯವನ್ನು ಈ ಕಾದಂಬರಿ ಸ್ಪಷ್ಟಪಡಿಸುತ್ತದೆ.

ಇಲ್ಲಿ ಸಲ್ಮಾಸದ್ದಿಲ್ಲದೆ ಸಾಧಿಸಿದ್ದು ಬಂಡಾಯವಾದರೆ, ರಶೀದ್‌ನು ತಂಗಿ ಸಲ್ಮಾಳ ಜೀವನಕ್ಕಾಗಿ ಧಾರ್ಮಿಕ ಸಂದಿಗ್ಧತೆಯಲ್ಲಿರುತ್ತಾನೆ. ವಾಸ್ತವ ಆದರ್ಶಗಳ ಗೊಂದಲದಲ್ಲಿ ಸಂಪ್ರದಾಯಗಳಿಗೆ ತಲೆಬಾಗುತ್ತಾನೆ. ಈ ಕಾದಂಬರಿಯಲ್ಲಿ ಸಂಪ್ರದಾಯ ಪರಿವರ್ತನೆಗಳ ಸುಳಿಯಲ್ಲಿ ಆಧುನಿಕ ಮನಸ್ಸುಗಳು ಅನುಭವಿಸುವ ತುಮುಲಗಳು, ಮೂಲಭೂತವಾದಿ ವಿಚಾರಗಳೊಂದಿಗಿನ ಸಂಘರ್ಷಗಳ ಮೂಲಕ ಮುಸ್ಲಿಂ ಜನಾಂಗದ ಜೀವನ ಪದ್ಧತಿಗಳು ದಾಖಲಾಗಿವೆ.

ಬೊಳುವಾರು ಕಥಾ ಸಾಹಿತ್ಯದ ಕುರಿತು ಎ.ಎನ್. ಲಕ್ಷ್ಮೀನಾರಾಯಣ ಅವರು "ಬೊಳುವಾರು ಒಬ್ಬ ಮುಸ್ಲಿಂ ಲೇಖಕರಾಗಿ ಕೇವಲ ಇಸ್ಲಾಂ ಧರ್ಮವನ್ನು ಮಾತ್ರ ಪ್ರಶ್ನಿಸದೆ, ಯಜಮಾನ್ಯ ಧರ್ಮವನ್ನೊಳಗೊಂಡಂತೆ ಒಟ್ಟಾರೆ ಧರ್ಮವನ್ನು ವಿಮರ್ಶೆಗೆ ಗುರಿಯಾಗುತ್ತಾರೆ. ಇಸ್ಲಾಂ ಧರ್ಮ ನಿರಾಕರಣೆ ಅವರ ನೇರ ಉದ್ದೇಶವಲ್ಲ. ವೈಚಾರಿಕ ನೆಲೆಯಿಂದ ಹೋರಾಡುವ ಮಾನವೀಯತೆ ಮತ್ತು ಅದನ್ನಾಧರಿಸಿದ ಮನುಷ್ಯ ಸಂಬಂಧ ಅವರ ಲಕ್ಷ್ಯ"[೧೯] ಎಂದು ಹೇಳುವುದು ಸಮಂಜಸವಾಗಿದೆ. ಜಿ.ಎಸ್. ಆಮೂರ ಅವರು "ಬೊಳುವಾರು ಅವರ ಮುಖ್ಯ ಆಸ್ಥೆಯಿರುವುದು ಮಾನವೀಯ ಸಂಬಂಧಗಳಲ್ಲಿ. ಈ ಸಂಬಂಧಗಳನ್ನು ಅವರು ತೆರೆದುತೋರುವ ರೀತಿ ವಿಶ್ಲೇಷಣೆಯಲ್ಲಿ ಬೊಳುವಾರು ಅವರ ಕತೆಗಳಲ್ಲಿ ಬರುವ ಮಾನವೀಯ ಸಂಬಂಧಗಳು ಎಷ್ಟೇ ಭಾವನಾತ್ಮಕವಾಗಿದ್ದರೂ ಅವುಗಳನ್ನು ಅವರು ನಿರ್ವಹಿಸುವ ರೀತಿ ಸಂಯಮ ನಿರ್ಲಿಪ್ತತೆಯಿಂದ ಕೂಡಿದುದು"[೨೦] ಎಂದು ಅಭಿಪ್ರಾಯಪಡುತ್ತಾರೆ. ಮಹಮದ್ ಕುಂ.ಞ್ ಕಥಾ ಪ್ರಸಂಗಗಳನ್ನು ವಿನೋದಪೂರ್ಣವಾಗಿ ನಿರೂಪಿಸುತ್ತಾ ಹೋಗುತ್ತಾರೆ. ಇವರ ಬಹುಪಾಲು ಕತೆಗಳು, ಕಾದಂಬರಿ

ದುರಂತಮಯವಾಗಿರದೆ ಸಮಸ್ಯೆಗೊಂದು ಪರಿಹಾರ ಹೇಳುತ್ತಾ ಮಾನವೀಯ ನೆಲೆಯಲ್ಲಿ ಮುಕ್ತಾಯಗೊಳಿಸುವುದು ಬೊಳುವಾರರ ಕಥೆಗಳ ವಿಶಿಷ್ಟ ಶೈಲಿಯಾಗಿದೆ.

ಫಕೀರ ಮುಹಮ್ಮದ್ ಕಟ್ಪಾಡಿಯವರ 'ಸರಕುಗಳು' ಮತ್ತು 'ಕಚ್ಚಾದ' ಈ ಎರಡು ಕಾದಂಬರಿಗಳು ಮುಸ್ಲಿಂ ಸಮಾಜದ ಸ್ಥಿತಿಯನ್ನು ಚಿತ್ರಿಸುತ್ತವೆ. ಮುಸ್ಲಿಂ ಸಮಾಜದ ಮೂಢನಂಬಿಕೆಗಳು, ದಾರಿದ್ರ್ಯ, ಹಸಿವು, ಬಡತನ, ಅನಕ್ಷರತೆ, ಅಜ್ಞಾನ, ಸಂಪ್ರದಾಯ, ಧಾರ್ಮಿಕ ನಿಯಮಗಳು ಈ ಕಾದಂಬರಿಗಳಲ್ಲಿ ಕಾಣಬಹುದು.

'ಸರಕುಗಳು' ಕಾದಂಬರಿಯಲ್ಲಿ ಬಡ ಮುಸ್ಲಿಂ ಹೆಣ್ಣುಮಕ್ಕಳ ದಯನೀಯ ಸ್ಥಿತಿಯ ಚಿತ್ರಣ ಕಂಡುಬರುತ್ತದೆ. "ಕನ್ನಡದಲ್ಲಿ ಇದುವರೆಗೂ ದಾಖಲಿಸದೇ ಇರುವ ಸಮಸ್ಯೆಯಿದು. ತಮ್ಮ ಹೆಣ್ಣುಮಕ್ಕಳನ್ನು ಹಣಕ್ಕಾಗಿ ಅರಬರಿಗೆ ೨–೩ ತಿಂಗಳವರೆಗೆ ನಿಕಾಹ್ ಮಾಡಿ, ತಿಂಗಳ ನಂತರ ತಲಾಖ್ ಪಡೆದು ಧರ್ಮದ ರಕ್ಷೆಯಲ್ಲಿ ಭಾರತ ಬಿಟ್ಟು ಅರಬ ದೇಶಕ್ಕೆ ಹಿಂದಿರುಗುವ ಶೇಖ್‌ಗಳ ಕಥೆಯಿದು. ಇಂಥ ಶೇಖ್‌ಗಳಿಂದ ಹುಟ್ಟಿದ ಮಕ್ಕಳು ಕೂಲಿನಾಲಿ ಮಾಡಿ ತಂದೆಯ ಆಶ್ರಯವಿಲ್ಲದೇ ಕಷ್ಟ–ನಷ್ಟ, ನೋವು, ಹಸಿವು, ಬಡತನಗಳಲ್ಲಿ ಬದುಕುವ ಕರುಣಾಜನಕ ಸ್ಥಿತಿ ಮತ್ತು ನಿರಪರಾಧಿ ಮಕ್ಕಳು ಹಾಗೂ ತಾಯಂದಿರ ದುರಂತದ ಬದುಕನ್ನು ಈ ಕಾದಂಬರಿ ಹೇಳುತ್ತದೆ. ಅಕ್ಷರಶಃ ಇಲ್ಲಿಯ ಹೆಣ್ಣುಗಳು ಸರಕುಗಳೇ ಆಗಿದ್ದು, ಹಣವಂತರು ತಮಗೆ ಬೇಕಾದಹಾಗೆ ಉಪಯೋಗಿಸಿ ಬೀಸಾಡುವುದು ಬಹಳ ಸೂಕ್ಷ್ಮವಾಗಿ ಹೆಣ್ಣಿನ ದೇಹವನ್ನು ಧರ್ಮದ ಮುಸುಕಿನಲ್ಲಿ ಶೋಷಿಸುವ ಹಣವಂತರ ಕ್ರೌರ್ಯ ಇಲ್ಲಿದೆ. ಮುಸ್ಲಿಂ ಸಮಾಜದ ಹೆಣ್ಣುಗಳ ದುರಂತದ ಬದುಕನ್ನು ಇವರಷ್ಟು ತೀವ್ರವಾಗಿ ಯಾವ ಕಾದಂಬರಿಯಲ್ಲೂ ಚಿತ್ರಿಸಿಲ್ಲ. ಮುಸ್ಲಿಂ ಸಮಾಜದ ಸಾಚಾ ಅನುಭವಗಳಿವು."[೨೧] ಇಂತಹ ವಸ್ತುವನ್ನು ಹೋಲುವ ಮತ್ತೊಂದು ಕಥೆ ಬೊಳುವಾರರ 'ಮುತ್ತುಚೇರ'.

ಸಾರಾ ಅವರ ಕಾದಂಬರಿಗಳಲ್ಲಿ ಮುಸ್ಲಿಂ ಜನಾಂಗದ ಸಂಪ್ರದಾಯಸ್ಥರ ಮೌಢ್ಯ, ಸ್ವಾರ್ಥಸೇಡಿನ ಮನೋಭಾವ ನಿಷ್ಚಳವಾಗಿ ಪ್ರಕಟವಾಗಿದ್ದರೆ, ಕಟ್ಪಾಡಿಯವರು ಮುಸ್ಲಿಂರಲ್ಲಿಯೇ ಇರುವ ಶ್ರೀಮಂತ–ಬಡವರ ನಡುವಿನ ಕಂದಕವನ್ನು ತೋರಿಸುತ್ತಾ ವರ್ಗ ಸಮಸ್ಯೆಗೆ ಒತ್ತುಕೊಡುತ್ತಾರೆ. ಬಡವಿ ಹಾಜಿಮಾಳಿಗೆ ಮೂರು ಜನ ಹೆಣ್ಣುಮಕ್ಕಳು. ಹಫ್ಸಾ, ಜುಲೇಖಾ, ನಫೀಸಾ ತಾಯಿಯೊಂದಿಗೆ ಕಷ್ಟದ ಜೀವನ ಕಳೆಯುತ್ತಾರೆ. ಇಲ್ಲಿನ ಹೆಣ್ಣುಮಕ್ಕಳು ಅರಬರ ತೊತ್ತಾಗಿ ಅವರ ಭೋಗದ ವಸ್ತುವಾಗಿ ಸಂತೆಯ ಸರಕುಗಳಾಗಿ ಕಾಣಿಸುತ್ತಾರೆ. ಮುಸ್ಲಿಂ ಬಡ ಹೆಣ್ಣುಮಕ್ಕಳ ಈ ಗೋಳಿನ ಕಥೆಯನ್ನು ಕಟ್ಪಾಡಿ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಬಡವಿ ಹಾಜೀಮಾ ತನ್ನ ಮಕ್ಕಳನ್ನು ಅರಬ್‌ರಿಗೆ ಕೊಟ್ಟು ಮದುವೆ ಮಾಡುತ್ತಾಳೆ. ಈ ವಿವಾಹಗಳು ಶಾಸ್ತ್ರೋಕ್ತವಾಗಿ ನಡೆಯುವುದಿಲ್ಲ.

ಅರಬರು ಕೊಡುವ ಹಣಕ್ಕಾಗಿ ಬಡ ಹೆಣ್ಣುಮಕ್ಕಳು ಈ ರೀತಿ ವಿವಾಹ ಮಾಡಿಕೊಳ್ಳುತ್ತಾರೆ. ನಫೀಸಾಳ ನಿಕಾಹವು ಮುದುಕ ಮುಸ್ತಾಪಾ ಎಂಬ ಅರಬ್‌ನ ಜೊತೆ ನಿಶ್ಚಯವಾದಾಗ ಅಲ್ಲಿಯ ಆ ನಿಕಾಹ್‌ವನ್ನು ವಿರೋಧಿಸುತ್ತಾರೆ. ಆದರೆ ಹಾಜೀಮಾಳು ಆ ಯುವಕ ಸಂಘಗಳ ಯುವಕರಿಗೆ "ಅರಬಿಗಳು ಮದುವೆಯಾಗುವುದನ್ನು ನಾವು ನಿಲ್ಲಿಸ್ತೀವಿ, ನಮಗೆ ದಿನಾ ಅನ್ನ ಹಾಕ್ತಿಯಾ ನೀನು? ನನ್ನ ಮಗಳನ್ನು ಮದುವೆಯಾಗ್ತೀಯಾ?"[೨೨] ಎಂದು ಕೇಳುವುದರಿಂದ ಯುವಕರು ಯಾವ ಉತ್ತರ ಕೊಡದೆ ಹೋಗುತ್ತಾರೆ. ಆದರೆ ಆಶ್ಚರ್ಯಕರ ಸಂಗತಿಯೆಂದರೆ ನಫೀಸಳನ್ನು ವಿವಾಹವಾಗುತ್ತಿರುವ ಮುದಿ ಅರಬನು ನಫೀಸಾಳ ತಂದೆಯಾಗಿರುತ್ತಾನೆ. ಇದನ್ನು ಗುರುತಿಸಿದ ಹಜೀಮಾ ನಡೆಯುತ್ತಿರುವ ವಿವಾಹವನ್ನು ತಡೆಯುತ್ತಾಳೆ. ಆ ಅರಬನು ದಶಕಗಳ ತಾತ್ಕಾಲಿಕ ವಿವಾಹವಾಗಿ ಹಾಜೀಮಾಳಿಗೆ ತಲಾಖ್‌ಕೊಟ್ಟು ತನ್ನ ಮಗಳನ್ನೇ ಮದುವೆಯಾಗುತ್ತಿರುವ ಸಂದರ್ಭವು ರೊಚ್ಚಿಗೇಡು ಮಾಡುತ್ತದೆ. ಬಡ ಮುಸ್ಲಿಂ ಯುವತಿಯರು ಅರಬನ ಬೋಗದ ಸರಕುಗಳಾಗುವುದು ದುರಂತವನ್ನು ಶ್ರೀಮಂತ ಮತ್ತು ಬಡವರ ನಡುವಿನ ಕಂದಕವನ್ನು ತೆರೆದಿಟ್ಟಿದ್ದಾರೆ.

'ಕಚ್ಚಾದ' ಕಾದಂಬರಿಯಲ್ಲಿ ಮುಸ್ಲಿಂ ಪರಿತ್ಯಕ್ತ ಮಹಿಳೆಯ ಜೀವನದ ಹೋರಾಟವಿದೆ. ಬಡ ಮುಸ್ಲಿಂ ಕೂಲಿಕಾರರು ಮತ್ತು ಯಜಮಾನರ ನಡುವಿನ ಸಂಘರ್ಷವನ್ನು ಪ್ರಾಮಾಣಿಕತೆ, ನಿಯತ್ತು, ಹಣ ಉಳಿತಾಯದ ತಂತ್ರಗಳನ್ನು ಅನಾವರಣ ಮಾಡಿದ್ದಾರೆ. ಇದು ಬೊಳುವಾರ ಮಹಮದ್ ಕುಂಞ 'ರೊಟ್ಟಿ ಫಾತಮ್ಮ'ಳ ಪಾತ್ರವನ್ನು ಹೋಲುತ್ತದೆ.

ಈ ಕಾದಂಬರಿಯ ನಾಯಕಿ ಕಚ್ಚಾದ ಅವಳ ಗಂಡ ಎರಡು ಮಕ್ಕಳು ಹುಟ್ಟಿದ ನಂತರ ಕೆಟ್ಟ ಹವ್ಯಾಸಗಳ ದಾಸನಾಗಿ ಎಂದಾದರೊಮ್ಮೆ ಮನೆಗೆ ಬಂದು ಹೋಗುತ್ತಿರುತ್ತಾನೆ. ಇದರಿಂದ ಮಕ್ಕಳು ಈತನ ಪರಿಚಯವನ್ನು ತಪ್ಪಿಸಿಕೊಳ್ಳುತ್ತವೆ. ಒಮ್ಮೆ ಈತ ಹಿರಿಯ ಮಗನನ್ನು ಮುದ್ದಿಸಲು ಹೋದಾಗ ತಂದೆಯಿಂದ ತಪ್ಪಿಸಿಕೊಳ್ಳಲು ಹೋಗಿ ಹೊಳೆ ಪಾಲಾಗುತ್ತಾನೆ. ಈ ದುಃಖವನ್ನು ಸಹಿಸದ ಕಚ್ಚಾದಳು ತನ್ನ ಗಂಡನನ್ನು ತರಾಟೆಗೆ ತೆಗೆದುಕೊಂಡ ಸಂದರ್ಭದಲ್ಲಿ ಆತ ಮನೆಯಿಂದ ಪಲಾಯನಗೈಯುತ್ತಾನೆ. ಕಚ್ಚಾದಳ ಮುಂದಿನ ಜೀವನವು ಕಷ್ಟಕರವಾಗುತ್ತದೆ. ಮನೆಯಲ್ಲಿ ದುಡಿಯುವ ಗಂಡಸರಿರಲಿಲ್ಲವಾದರೂ ಕಚ್ಚಾದ ಯಾರ ಹಂಗಿನಲ್ಲಿ ಇರಲು ಬಯಸುವುದಿಲ್ಲ. ಸ್ವತಂತ್ರವಾಗಿ ಹೊಲ-ಗದ್ದೆಗಳಲ್ಲಿ ಕೂಲಿ ಮಾಡುತ್ತಾ ಬದುಕು ಸಾಗಿಸುತ್ತಾಳೆ. ಗಂಡನಿಲ್ಲದ ಕಚ್ಚಾದಳಿಗೆ ಅವಳ ಬಾಯಿಯೇ ಬಂಡವಾಳವಾಗುತ್ತದೆ. ಅವಳ ಹರಿತವಾದ ಮಾತುಗಳಿಂದ ಎಲ್ಲರ ಬಾಯಿ ಮುಚ್ಚಿಸುತ್ತಾಳೆ. ಕಚ್ಚಾದಳ ಚಾಲಕಿತನಕ್ಕೆ, ಬುದ್ಧವಂತಿಕೆಗೆ ಎಲ್ಲರೂ

ಗೌರವ ಕೊಡುತ್ತಿದ್ದರು. ಒಮ್ಮೆ ಆ ಊರಿನ ಸಾಹುಕಾರ ಕೂಲಿಗಾಗಿ ಜೋಳ್ಳು ಭತ್ತ ಕೊಟ್ಟಿದ್ದಕ್ಕಾಗಿ "ಒಂದುವಾರ ಗದ್ದೆಯಲ್ಲಿ ಕೂಲಿ ಮಾಡಿದ್ದಕ್ಕೆ ದಡ್ಡುಭತ್ತ ಕೊಟ್ಟಿರುವೆಯಲ್ಲ, ದುಡಿದವರಿಗೆ ಮೋಸ ಮಾಡುವುದೇ? ಹಣ ಮಾಡೋ ಒಂದಾ...ನಿಂಗೆ ಆಖಿರತ್‌ನಲ್ಲಿ ಅಲ್ಲಾಹು ಪ್ರಶ್ನಿಸುವ ಕಾಲ ಈಗ್ಲೇ ಬರಬಾರರ್ದೇ..."[೨೩] ಹೀಗೆ ಹೇಳಿ ಊರ ತುಂಬಾ ರಂಪಮಾಡಿ ಒಳ್ಳೆಯ ಭತ್ತವನ್ನು ತೆಗೆದುಕೊಳ್ಳುತ್ತಾಳೆ. ಆ ಸಂದರ್ಭದಲ್ಲಿ ಯಜಮಾನರ ಮನ ಒಲಿಸುತ್ತಾಳೆ. ಅಲ್ಲದೆ ಊರಲ್ಲಿ ಯಾರಾದರೂ ಜಗಳ ಮಾಡಿದರೆ ಅವರಿಗೆ ಬುದ್ಧಿವಾದ ಹೇಳಿ ಸಮಸ್ಯೆ ಪರಿಹರಿಸುತ್ತಾಳೆ. ಆದರೆ ಕಚ್ಚಾದ ತನ್ನ ಮಗನಿಗೆ ವಿದ್ಯಾವಂತನಾಗಿ ಮಾಡುವಲ್ಲಿ ಮತ್ತು ಆತನಿಗೆ ಉದ್ಯೋಗ ಕಲಸಿಕೊಡಲು ನಿರಾಕರಿಸುತ್ತಾಳೆ. 'ಇದ್ದೊಬ್ಬ ಮಗನಿಗೆ ಏನಾದರೂ ಆದರೆ? ತನ್ನ ಜೀವನಕ್ಕೆ ಗತಿಯಾರು? ಎಂಬ ಮನೋಭಾವ ಹೊಂದಿದ ಕಚ್ಚಾದಳಿಗೆ ನೆರೆ-ಹೊರೆಯವರು ಬುದ್ಧಿ ಹೇಳುತ್ತಾರೆ. ಆದರೂ ಕಚ್ಚಾದ ತನ್ನ ಮಗನನ್ನು ಒಂದು ದಡಕ್ಕೆ ಸೇರಿಸುವ ವಿಚಾರವನ್ನು ಗಂಭೀರವಾಗಿ ತೆಗೆದುಕೊಳ್ಳದಿದ್ದಾಗ ಮಗನೇ ರಿಕ್ಷಾ ನಡೆಸಲು ಮುಂದಾಗುತ್ತಾನೆ. ಈ ಸಂದರ್ಭದಲ್ಲಿ ಕಚ್ಚಾದಳು ತನ್ನ ಅಡಿಗೆಯ ರುಚಿಯಿಂದ ಊರ ಸಾಹುಕಾರನ ಮನ ಒಳಿಸುತ್ತಾಳೆ. ಆ ಸಾಹುಕಾರನ ಸಹಾಯದಿಂದ ಬ್ಯಾಂಕೊಂದರಲ್ಲಿ ಸಾಲ ತೆಗೆದುಕೊಂಡು ಮಗನಿಗೆ ಹೊಸ ರಿಕ್ಷಾ ಖರೀದಿಸುತ್ತಾಳೆ. ಬ್ಯಾಂಕಿನ ಕಂತುಗಳನ್ನು ಪ್ರತಿ ತಿಂಗಳು ತಪ್ಪದೆ ತುಂಬುತ್ತಾಳೆ. ಮಗನ ಮದುವೆಯಾದ ನಂತರ ಅತ್ತೆ-ಸೊಸೆ ಜಗಳ ಪ್ರಾರಂಭವಾಗುತ್ತದೆ. ಸೊಸೆ ತನ್ನ ಗಂಡನ ಜೊತೆಗೆ ತವರಿಗೆ ಹೋಗಿ ಆರು ತಿಂಗಳವಾದರೂ ಮರಳಿ ಬರುವುದಿಲ್ಲ. ತನ್ನ ಮಗನನ್ನು ಒಂದುಕ್ಷಣ ಬಿಟ್ಟಿರದ ಕಚ್ಚಾದಳಿಗೆ ವ್ಯಥೆಯಾದರೂ ಸಹಿಸಿಕೊಳ್ಳುತ್ತಾಳೆ. ಆದರೆ ಮನೆಗೆ ಬ್ಯಾಂಕಿನಿಂದ ಸಾಲ ಪತ್ರ ಬಂದಾಗ ತನ್ನ ಮರ್ಯಾದೆಗೆ ದಕ್ಕೆ ಬಂದಿತ್ತೆಂದು ಮಗನನ್ನು ತರಾಟೆಗೆ ತೆಗೆದುಕೊಳ್ಳುತ್ತಾಳೆ. "ನಂಗೆ ಅದ್ನೆಲ್ಲಾ ಹೇಳಬೇಡ ಮೋನೆ ನಿನ್ನಪ್ಪ, ನೀನು ಎಲ್ಲರೂ ಸೇರಿ ನನ್ನ ಪಾಲಿಗೆ ಈ ದುನಿಯಾ ಏನ್ನೇನೋ ನರಕವನ್ನಾಗಿ ಮಾಡಿಬಿಟ್ರೆ ಇನ್ನು ದುನಿಯಾದಲ್ಲಾದ್ರೂ ನಂಗೆ ಸುಖಾಸಿಗ್ಲಿ ಅಂದ್ರೆ ಅದ್ಕೂ ಬಿಡ್ತಾ ಇಲ್ವಾ? ನಾಳೆ ಸತ್ತ ನಂತರ ಸಾಲ ಬಾಕಿ ಇಟ್ಟು ಬಂದಿದಿಯಾಂತ ಇಷ್ಟಿಷ್ಟೇ ಮೈಯರಕ್ತ ಮಾಂಸವನ್ನು ಕಿತ್ತು ತೆಗೆದು ಮಲಕ್‌ಗಳು ಸಿಕ್ಷೆ ಕೊಡ್ಲಿ ಅಂತಲ್ವಾ ನಿನ್ನ ಆಸೆ?"[೨೪] ಎಂದು ಮಗನಿಗೆ ಹೇಳುತ್ತಾಳೆ. ಹೀಗೆ ಕಚ್ಚಾದಳು ಸತ್ಯ, ನಿಷ್ಠೆ, ಪ್ರಾಮಾಣಿಕತೆಗೆ ಹೆಚ್ಚು ಮಹತ್ವ ಕೊಡುತ್ತಾಳೆ.

ಹೀಗೆ 'ಚಂದ್ರಗಿರಿ ತೀರದಲ್ಲಿ' ಕಾದಂಬರಿಯ 'ನಾದಿರಾ', 'ಸಹನಾ' ಕಾದಂಬರಿಯ ನಸೀಮ, ಸರಕುಗಳು ಕಾದಂಬರಿಯ ನಫೀಸಾ 'ಜೆಹದಾ' ಕಾದಂಬರಿಯ ಸಲೀನ, ರೋಸಿ ಈ ಮುಂತಾದ ಮಹಿಳಾ ಪಾತ್ರಗಳು ಬದುಕಿನ ಪೂರ್ಣತೆಯತ್ತ ಸಾಗುವ ಸಂಕೇತಗಳಂತಿವೆ. ಈ ಲೇಖಕರು

ಪುರುಷ ಪ್ರಧಾನ ಸಂಸ್ಕೃತಿಯನ್ನು ತಿರಸ್ಕರಿಸುತ್ತಲೇ ಸ್ತ್ರೀ–ಪುರುಷ ಸಮಾನ ಸಂಸ್ಕೃತಿಗಾಗಿ ಹೊಸ ನೆಲೆಗಳ ಶೋಧ ನಡೆಸಿದ್ದಾರೆ. ಈ ಐದು ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳೇ ಪ್ರಾಮುಖ್ಯತೆಯನ್ನು ಪಡೆದಿವೆ.

'ಚಂದ್ರಗಿರಿಯ' ನಾದಿರಾ ತಂದೆ ಮತ್ತು ಗಂಡ ಈ ಇಬ್ಬರು ಪುರುಷರುಂಟು ಮಾಡಿದ ತಪ್ಪಿಗಾಗಿ ತನ್ನ ಬದುಕಿನಲ್ಲಿ ಅತೀವ ನೋವನ್ನುಂಡು ಕೊನೆಗೆ ಈ ವ್ಯವಸ್ಥೆಯ ಕ್ರೂರತನಕ್ಕೆ ಬೇಸತ್ತು ನದಿಯಲ್ಲಿ ಹಾರಿ ಪ್ರಾಣ ಬಿಡುವ ದುರಂತ ಕಥೆ. ಹತಾಶಭಾವ ಹೆಣ್ಣೊಬ್ಬಳ ಹೃದಯಸ್ಪರ್ಶಿ ಕಥೆಯಾಗಿದೆ. 'ಸಹನಾ' ಕಾದಂಬರಿಯ ನಸೀಮ ಬದಕುವ ಛಲ, ಆತ್ಮಗೌರವ, ಜೀವನೋತ್ಸಾಹ ಅನೇಕ ಮಹಿಳೆಯರಿಗೆ ಪ್ರೇರಣೆಯನ್ನುಂಟು ಮಾಡುತ್ತದೆ. ಶತಮಾನಗಳಿಂದ ಸಂಪ್ರದಾಯದ ಸರಕುಗಳಲ್ಲಿ ಬಂಧಿಯಾಗಿ ಮಾತು ಕಳೆದುಕೊಂಡ ನಸೀಮಳಂಥವರು ಇಲ್ಲಿ ದನಿಎತ್ತಿ ಮಾತನಾಡುವುದರ ಜೊತೆಗೆ ಮುಖವೆತ್ತಿ ಬದುಕಲೆತ್ನಿಸಿದ್ದಾರೆ. ಅಂತೆಯೇ ನಸೀಮಳಂತಹ ಪಾತ್ರಗಳು ಮುನುಷ್ಯರ ಅದಮ್ಯ ಚೇತನಕ್ಕೆ ಹಿಡಿದ ಕನ್ನಡಿಯಂತಿವೆ. ನಾದಿರಾ ಪುರುಷ ಪ್ರಧಾನ ವ್ಯವಸ್ಥೆಯ ಗೆರೆಗಳನ್ನು ದಾಟದೆ ಮೌನವಾದರೆ, ನಸೀಮ ಆ ಗೆರೆಗಳನ್ನು ಸ್ವಲ್ಪಮಟ್ಟಿಗೆ ದಾಟುವುದರ ಮೂಲಕ ಬದುಕಿನ ಮಹತ್ವವನ್ನು ಸಾರಿ ಹೇಳುತ್ತಾಳೆ.

'ಸಹನಾ' ಕಾದಂಬರಿಯ ನಸೀಮಳು ತೆಗೆದುಕೊಳ್ಳುವ ತೀರ್ಮಾನ ಒಂದು ರೀತಿಯಾದರೆ 'ಸರಕುಗಳು' ಕಾದಂಬರಿಯ ನಫೀಸಾ ತೆಗೆದುಕೊಳ್ಳುವ ನಿರ್ಣಯ ಮತ್ತೊಂದು ರೀತಿಯಿಂದ ಮಹತ್ವದ್ದಾಗುತ್ತದೆ. ಸಲೀಮ ಆಯೇಷಾಳಿಗೆ ತಲಾಖ್ ಕೊಟ್ಟು ಮತ್ತೆ ತನ್ನ ಹತ್ತಿರ ಬಂದಾಗ ಆಕೆ ತನ್ನ ವಿಚಾರವನ್ನು ಸ್ಪಷ್ಟಪಡಿಸುತ್ತಾಳೆ. ಮದುವೆಯಾಗುವುದಾದರೆ ಕದ್ದುಮುಚ್ಚಿ ಗುಟ್ಟಿನಲ್ಲಿ ಆಗಕೂಡದು "ಗುಡಿಸಲುಗೇರಿಯ ಹೆಣ್ಣು ನಾನು, ಎಲ್ಲ ಗೌರವದೊಂದಿಗೆ ನಿಮ್ಮೊಂದಿಗೆ ನಿಕಾಹ್ ಆಗಿರಬೇಕು"[೨೫] ಎಂದು ಸಲೀಮನಿಗ ಹೇಳುವಲ್ಲಿ ನಫೀಸಾಳ ಧೈರ್ಯ ಮತ್ತು ಬದುಕಿನ ಬಗೆಗೆ ಅವಳು ಹೊಂದಿರುವ ಕಾಳಜಿ ಸ್ಪಷ್ಟವಾಗುತ್ತದೆ. ಬೊಳುವಾರು ಅವರ ಕಾದಂಬರಿಯಾದ 'ಜೆಹಾದ್'ನಲ್ಲಿ ಸಲ್ಮಾಳಂತಹ ಮುಗ್ಧೆ ತನ್ನ ಬದುಕಿನಲ್ಲಿ ತೀವ್ರತರವಾದ ಪ್ರಗತಿಯನ್ನು ಕಾಣುವ ಸಂದರ್ಭ ಆಶ್ಚರ್ಯ ಹುಟ್ಟಿಸುತ್ತದೆ. ಸಲ್ಮಾ ಸಲೀಮರಂತಹ ಪಾತ್ರಗಳು 'ಜೆಹಾದ್' ಕಾದಂಬರಿಯಲ್ಲಿ ಗಮನ ಸೆಳೆಯುತ್ತವೆ.

ಸಾರಾ ಅಬೂಬಕ್ಕರ್ ಅವರು ಮುಸ್ಲಿಂ ಜನಾಂಗದ ಬದುಕನ್ನು ಮಾತ್ರ ತಮ್ಮ ಕಾದಂಬರಿಗಳಲ್ಲಿ ತಂದರೆ ಬೊಳುವಾರು ಮಹಮದ್ ಕುಂಞ್, ಫಕೀರ ಮುಹಮದ್ ಕಟ್ಪಾಡಿಯವರು ಮಾತ್ರ ಮುಸ್ಲಿಂ ಬದುಕನ್ನು ಬೇರೆ ಸಂಸ್ಕೃತಿಯ ನೆಲೆಗಳ ಮೂಲಕ ಗುರುತಿಸಲು ಪ್ರಯತ್ನಿಸಿದ್ದಾರೆ.

ಸಾರಾ ಕಾದಂಬರಿಗಳಲ್ಲಿ ಕೇವಲ ಮುಸ್ಲಿಂ ಜನಾಂಗದ ನೋವು-ನಲಿವಿನ ಚಿತ್ರಣವಿದ್ದರೆ, ಬೊಳುವಾರು, ಕಟ್ಪಾಡಿಯವರು ತಮ್ಮ ಕಾದಂಬರಿಗಳಲ್ಲಿ ಮುಸ್ಲಿಂ, ಹಿಂದೂ, ಕ್ರಿಶ್ಚಿಯನ್ ಜನಾಂಗದ ಬದುಕನ್ನು ಮತ್ತು ಸಂಘರ್ಷವನ್ನು ತಂದಿದ್ದಾರೆ.

ಸಾರಾ ಅವರು ಮುಸ್ಲಿಂ ಜನಾಂಗದ ಮೌಢ್ಯತೆ, ದರ್ಪ, ಅಹಂಭಾವ, ಸಣ್ಣತನವನ್ನು ಹೇಳುತ್ತಲೇ ನಸೀಮಳಂತಹ ಪಾತ್ರದ ಮೂಲಕ ತಣ್ಣನೆಯ ಬಂಡಾಯವನ್ನು ಹುಟ್ಟು ಹಾಕಿದರೆ ಬೊಳುವಾರು ತಮ್ಮ ವಿನೋದ ಶೈಲಿಯಲ್ಲಿಯೇ ಈ ಸಮಾಜದ ವ್ಯವಸ್ಥೆಯನ್ನು ಕ್ರೌರ್ಯವನ್ನು ವಿವರಿಸುತ್ತಾ ವಿಭಿನ್ನ ಸಂಸ್ಕೃತಿಯ ವ್ಯಕ್ತಿಗಳ ಬದುಕಿನ ಸಂಘರ್ಷದೊಂದಿಗೆ ಮನುಷ್ಯ ಚೇತನದ ಸಾಧ್ಯತೆಯನ್ನು ತೆರದಿಡುತ್ತಾರೆ. ಕಟ್ಪಾಡಿಯವರು ಯಾವುದೇ ನಿರ್ಣಯವನ್ನು ಕೊಡದೆ ಯಥಾಸ್ಥಿತಿಯನ್ನು ನೈಜವಾಗಿ ಮುಂದಿಡುತ್ತಲೇ ತೀವ್ರ ಪರಿಣಾಮವನ್ನುಂಟು ಮಾಡುತ್ತಾರೆ. ಅನಂತಮೂರ್ತಿಯವರ ಸಂಸ್ಕಾರ, ಘಟಶ್ರಾದ್ಧಗಳಂತೆ ಇವರ ಕೃತಿಗಳು ಮುಸ್ಲಿಂ ಬದುಕಿನ ಸೂಕ್ಷ್ಮತೆಗಳನ್ನು ಹಿಡಿದಿಟ್ಟಿದ್ದಾರೆ.

ಹೀಗೆ ಕಟ್ಪಾಡಿಯವರ ಉಳಿದ ಲೇಖಕರಿಗಿಂತ ವಿಶಿಷ್ಟವಾಗಿ ಕಾಣಿಸಿಕೊಳ್ಳುತ್ತಾರೆ. ಇವರ ಕಾದಂಬರಿಯಲ್ಲಿ ಮುಸ್ಲಿಂ ಬದುಕಿನ ಹುಡುಕಾಟವಿದೆ. ಬಡ ಮಹಿಳೆಯರ ನೋವಿನ ಕತೆಯಿದೆ. ಮುಸ್ಲಿಂ ಜನಾಂಗದ ಸಂಪ್ರದಾಯ, ಮೌಢ್ಯ, ಸ್ವಾರ್ಥ, ಶ್ರೀಮಂತರ-ಬಡವರ ನಡುವಿನ ವರ್ಗಸಂಘರ್ಷ, ತಲಾಕ್, ಘೋಷಾ ಪದ್ಧತಿ, ಹಸಿವು ಇವರ ಕಾದಂಬರಿಗಳಲ್ಲಿ ಚಿತ್ರಿತವಾಗಿವೆ.

**ಕೊನೆ ಟಿಪ್ಪಣಿಗಳು:**


೧. ರಂ.ಶ್ರೀ.ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪುಟ-೧

೨. ಕೃಷ್ಣಪ್ಪ.ಜಿ, ಕುವೆಂಪು ಕಾದಂಬರಿಗಳಲ್ಲಿ ದಲಿತ ಜೀವನ(ಲೇ) ಮಾತು ತಲೆಯೆತ್ತುವ ಬಗೆ(ಸಂ), ಪುಟ-೧೮೩

೩. ಸ್ವಾಮಿರಾವ್ ಕುಲಕರ್ಣಿ, ಕನ್ನಡ ಸಾಹಿತ್ಯಕ್ಕೆ ಮುಸ್ಲಿಂ ಪದಕಾರರ ಅನನ್ಯ ಕೊಡುಗೆ, ಕನ್ನಡ ಪ್ರಭ ದಿ: ೧೫-೧೨-೧೯೯೬

೪. ಅಮೂರ.ಜಿ.ಎಸ್, ಅನುಭಾವ ಕಥಾ ಸಂಕಲನದ ಮುನ್ನುಡಿಯಿಂದ, ಪುಟ-೭

೫. ಅಶೋಕ.ಟಿ.ಪಿ, ಹೊಸತನದ ಹೊಳಹು(ವಿಮರ್ಶೆ), ಪ್ರಜಾವಾಣಿ, ದಿ: ೧೭-೩-೧೯೯೧

೬. ಅಶೋಕ.ಟಿ.ಪಿ, ಸಾಹಿತ್ಯ ಸಂದರ್ಭ, ಪುಟ-೧೪೮

೭. ಅಶೋಕ.ಟಿ.ಪಿ, ಹೊಸತನದ ಹೊಳಹು(ವಿಮರ್ಶೆ), ಪ್ರಜಾವಾಣಿ, ದಿ: ೧೭-೩-೧೯೯೧

೮. ಹನುಮಂತಯ್ಯ.ಎಲ್, ಕಥಾಕಥನ, ಪುಟ-೧೦೬

೯. ಹನುಮಂತಯ್ಯ.ಎಲ್, ಕಥಾಕಥನ, ಪುಟ-೧೦೬

೧೦. ಹನುಮಂತಯ್ಯ.ಎಲ್, ಕಥಾಕಥನ, ಪುಟ-೧೧೧

೧೧. ಷರೀಪಾ. ಕೆ. ಮುಸ್ಲಿಂ ಮಹಿಳಾ ಸಂವೇದನೆ, ಪುಟ-೮೪-೮೫

೧೨. ಫಕೀರ ಮುಹಮ್ಮದ್, ಕಟ್ಪಾಡಿ, ನೊಂಬು, ಪುಟ-೧೪೩-೧೪೪

೧೩. ಸಾರಾ ಅಬೂಬಕ್ಕರ್, ಚಪ್ಪಲಿಗಳು, ಪುಟ-೧೨

೧೪. ಸಾರಾ ಅಬೂಬಕ್ಕರ್, ಚಂದ್ರಗಿರಿಯ ತೀರದಲ್ಲಿ, ಪುಟ-೧೫

೧೫. ಸಾರಾ ಅಬೂಬಕ್ಕರ್, ಅನಾವರಣ, ಪುಟ-೧೯

೧೬. ಸಾರಾ ಅಬೂಬಕ್ಕರ್, ಚಂದ್ರಗಿರಿಯ ತೀರದಲ್ಲಿ, ಪುಟ-೬೭

೧೭. ಸಾರಾ ಅಬೂಬಕ್ಕರ್, ಸಹನಾ, ಪುಟ-೧೭೬-೧೭೭

೧೮. ಸಾರಾ ಅಬೂಬಕ್ಕರ್, ಸಹನಾ-ಮುನ್ನುಡಿ ೨೦೦೨, ಪುಟ-೪

೧೯. ರಹಮತ್ ತರೀಕೆರೆ, ಸಾಹಿತ್ಯ ವಿಮರ್ಶೆ, ಪುಟ-೧೩೭

೨೦. ಬೊಳವಾರ ಮಹಮದ್ ಕುಂಞ, ಜೆಹಾದ್, ಪುಟ-ಬೆನ್ನುಡಿ

೨೧. ರಂಗರಾಜ ವನದುರ್ಗ(ಸಂ), ಬಂಡಾಯ ಸಾಹಿತ್ಯ ಸಂವೇದನೆ, ಪುಟ-೧೩೮

೨೨. ಫಕೀರ್ ಮುಹಮ್ಮದ್ ಕಟ್ಪಾಡಿ, ಸರಕುಗಳು, ಪುಟ-೬೯

೨೩. ಫಕೀರ್ ಮುಹಮ್ಮದ್ ಕಟ್ಪಾಡಿ, ಕಚ್ಚಾದ, ಪುಟ-೬

೨೪. ಫಕೀರ್ ಮುಹಮ್ಮದ್ ಕಟ್ಪಾಡಿ, ಕಚ್ಚಾದ, ಪುಟ-೧೨೦-೧೨೧

೨೫. ಫಕೀರ್ ಮುಹಮ್ಮದ್ ಕಟ್ಪಾಡಿ, ಸರಕುಗಳು, ಪುಟ-೧೩೭

# ಅಧ್ಯಾಯ : ನಾಲ್ಕು

## ಕಟ್ಪಾಡಿಯವರ ಕಾದಂಬರಿಗಳಲ್ಲಿ ಮುಸ್ಲಿಂ ಸಮಾಜದ ಸ್ವರೂಪ

# ಅಧ್ಯಾಯ : ನಾಲ್ಕು

# ಕಟ್ಪಾಡಿಯವರ ಕಾದಂಬರಿಗಳಲ್ಲಿ ಮುಸ್ಲಿಂ ಸಮಾಜದ ಸ್ವರೂಪ

## ೪.೧. ಪಾತ್ರಗಳು :

'ರವಿ ಕಾಣದ್ದನ್ನು ಕವಿ ಕಾಣುತ್ತಾನೆ' ಎನ್ನುವಂತೆ, ಈ ಪ್ರಕೃತಿಯಲ್ಲಿ ಸೌಂದರ್ಯವನ್ನು, ಕಣ್ಣಿಗೆ ಕಾಣುವಷ್ಟರ ವರೆಗೆ ಕಂಡು ಸಂತೋಷಪಡುತ್ತಾನೆ. ತನ್ನ ಮನದಲ್ಲಿ ಆನಂದವನ್ನು ಕಾಣುತ್ತಾನೆ. ಆ ಸೌಂದರ್ಯದ ಆನಂದದಲ್ಲಿಯೆ ವಿಸ್ತೃತವಾಗಿ ಕಲ್ಪಿಸುತ್ತಾನೆ. ಹಗಲು ರಾತ್ರಿ ಎನ್ನದೆ, ಅವನ ದೃಷ್ಟಿಯು ಸದಾ ತೆರೆದುಕೊಂಡಿರುತ್ತದೆ. ಅಂತರ್ಯದ ದೃಷ್ಟಿಗೆ ಕಾಣುವ ಕಾಣ್ಕೆಯೇ ಲೇಖಕನ ಬರಹ, ಅಲ್ಲ ಹೊಸ ಸೃಷ್ಟಿಯೇ ದೃಷ್ಟಿಸುತ್ತದೆ, ಸೃಷ್ಟಿಸುತ್ತದೆ. ಅಂತೆಯೆ ಸಾಹಿತಿ ಒಬ್ಬ ಸೃಷ್ಟಿಕರ್ತ, ಹೊಸಲೋಕ, ಹೊಸಬದುಕು, ವಸ್ತುವಿನ ಪ್ರತಿಸೃಷ್ಟಿಯಿಂದ, ಹೊಸಹೊಸ ಪಾತ್ರಗಳು ಸೃಷ್ಟಿಯಾಗುತ್ತವೆ. ತಾನು ನೋಡಿದ ಘಟನೆ, ಕೇಳಿದ ಸಂಭಾಷಣೆ, ನಡೆದಾಡುತ್ತಿರುವ ವ್ಯಕ್ತಿಗಳು, ಆ ವ್ಯಕ್ತಿಗಳ ನಡವಳಿಕೆಗಳು, ಹಲವಾರು ಸನ್ನಿವೇಶ ಸಂದರ್ಭಗಳು, ಬಿರುಗಾಳಿಯಂತೆ ಬಂದೆರಗುವ ಸಮಸ್ಯೆಗಳು, ತನ್ನ ಆವರಣದಲ್ಲಿನ ಪರಿಸರದ ಪರಿಸ್ಥಿತಿಗಳು, ತನ್ನ ಸುತ್ತಮುತ್ತಲಿನ ಜನತೆಯ ನೋವು–ನಲಿವುಗಳು, ಸಂಕಷ್ಟಗಳು, ಇವೆಲ್ಲವುಗಳನ್ನು ಅನುಭವಿಸುತ್ತ ಬದುಕುತ್ತಿರುವ ಸಾಹಿತಿಗೆ, ವಸ್ತು, ಪಾತ್ರ ಸನ್ನಿವೇಶಗಳಾಗುತ್ತವೆ. ಅವನದೆಯಾದ ವಿಶೇಷ ದೃಷ್ಟಿಯು ಇವೆಲ್ಲವುಗಳನ್ನು ಬಹು ಸೂಕ್ಷ್ಮವಾಗಿ ಗಮನಿಸುತ್ತದೆ. ಅವುಗಳಿಗೆ ಸ್ಪಂದಿಸುತ್ತಾ ತನ್ನ ಬದುಕಿನ ಬರಹಕ್ಕೆ ಇಳಿಯುತ್ತಾನೆ.

ಕಾದಂಬರಿಕಾರನು ತನ್ನ ಸುತ್ತಮುತ್ತಲಿನ ಜನರನ್ನು ನೋಡುತ್ತಾನೆ. ಅವರ ಜೀವನದ ಪ್ರವಾಹವನ್ನು ನಿರೀಕ್ಷಿಸುತ್ತಾನೆ. ನಮ್ಮ ಕಣ್ಣಿಗೆ ಸಾಮಾನ್ಯ ಜನರಂತೆ ಕಾಣುವವರು. ಕಾದಂಬರಿಕಾರನ ಕಣ್ಣಿಗೆ ವಿಶಿಷ್ಟ ಪೂರ್ಣ ವ್ಯಕ್ತಿಗಳಾಗಿ ಕಾಣುತ್ತಾರೆ. ಕಾದಂಬರಿಯಲ್ಲಿ ಪಾತ್ರಗಳಿಗೆ ಬಹು ಪ್ರಾಮುಖ್ಯತೆ ಇದೆ. ಕಾದಂಬರಿಯಲ್ಲಿ ಮೂಡಿದ ಪಾತ್ರಗಳು ಎಲ್ಲಿಂದಲೋ ಬಂದವುಗಳಲ್ಲ.

ನಮ್ಮ ಬದುಕಿನ ಸುತ್ತ ವಾಸಿಸುತ್ತಿರುವ ಜೀವಂತ ವ್ಯಕ್ತಿಗಳ ಇಲ್ಲಿನ ಪಾತ್ರಗಳು. "ಕಥೆಗಾರ ಸೃಷ್ಟಿಸಿದ ಪಾತ್ರ ಕೇವಲ ಚಿತ್ರ ಪ್ರತಿಮೆಯಾಗದೇ ಜೀವಂತವಾಗಲೂ, ಅತೀ ಸೂಕ್ಷ್ಮ ಹಾಗೂ ಎಚ್ಚರದ ಅವಶ್ಯಕತೆಯಿದೆ. ಕಥೆಯನ್ನು ಮಾನವೀಯ ದೃಷ್ಟಿಯಿಂದ ನೋಡಿ, ಅಲ್ಲಿಯ ಸನ್ನಿವೇಶ ಹಾಗೂ ಸೃಷ್ಟಿತ ಪಾತ್ರಗಳ ಭಾವಗಳಲ್ಲಿ ತಾನೂ ಭಾಗಿಯಾಗಿ, ಅನುಭವಿಸಿ, ಪ್ರತಿಮಾತು ನಡೆನುಡಿಗಳಲ್ಲೂ ಪ್ರಭಾವಿತ ಪರಿಣಾಮವನ್ನು ತುಂಬಿಸಲು ಬಹಳಷ್ಟು ಶ್ರಮ ಪಡಬೇಕಾಗುತ್ತದೆ"[1] ಎಂದು ಡಿ. ವಿಜಯಾ ಅವರು ಪಾತ್ರ ಚಿತ್ರಣ ಕುರಿತು ಹೇಳಿದಂತೆ, ಕಥೆಗಳಲ್ಲಿನ ಪಾತ್ರ ಚಿತ್ರಣದ ಸೃಷ್ಟಿಯನ್ನು, ಕಾದಂಬರಿಕಾರನು ಒಂದು ವಸ್ತುವನ್ನು ವಿವರವಾಗಿ ಸನ್ನಿವೇಶ, ಘಟನೆಗಳ ಮೂಲಕ ಕಾದಂಬರಿಯನ್ನು ಓದಿಕೊಂಡು ಹೋಗಲು ಭಾಷೆ, ತಂತ್ರ ಮತ್ತು ಪ್ರತಿಭೆಯನ್ನು, ಹೊರ ಹೊಮ್ಮಿಸುವಂತಹ ಪಾತ್ರಗಳ ರಚನೆಯ ಅವಶ್ಯಕತೆಯನ್ನು ಹೇಳುತ್ತಾರೆ. ಈ ಪಾತ್ರಗಳು ಕಾದಂಬರಿಕಾರನ ಮೂಲ ಉದ್ದೇಶ ಮತ್ತು ಧೋರಣೆಯನ್ನು ಸಹಜವಾಗಿ ನಿರ್ವಹಿಸಲು ಸಾಧ್ಯವಾಗುತ್ತದೆ. ಅಲ್ಲದೆ ಸಮಾಜದ ಜೊತೆಗೆ ಈ ಪಾತ್ರಗಳು ಬದುಕಿ ಪಂಡಿತ ಪಾಮರರನ್ನು ರಂಜಿಸುತ್ತವೆ. ಆರಾಧಿಸುವಂತೆ ಮಾಡುತ್ತವೆ. ಓದುಗನಿಗೆ ಹೊಸ ಹೊಸ ಅನುಭವಗಳನ್ನು ನೀಡುತ್ತವೆ.

ಇಂತಹ ಪಾತ್ರಗಳ ಸೃಷ್ಟಿಯನ್ನು ಮುಸ್ಲಿಂ ಲೇಖಕರಲ್ಲಿ ಕಾಣಬಹುದಾಗಿದೆ. ಕಾದಂಬರಿಯಲ್ಲಿ ಬರುವ ಮುಸ್ಲಿಂ ಪಾತ್ರಗಳು ಆ ಜನಾಂಗದ ವಿವಿಧ ಸ್ತರಗಳನ್ನು ಬಿತ್ತರಿಸುತ್ತವೆ. ಅಂದರೆ ಪ್ರತಿನಿತ್ಯದ ಜೀವನದಲ್ಲಿ ವ್ಯಕ್ತಿಗಳು, ತಮ್ಮ ಆಸೆ-ನಿರಾಸೆಗಳು, ದುಃಖ-ಭರವಸೆಗಳು, ಹೊಯ್ದಾಟ-ಹೋರಾಟಗಳಿಗೆ ಹಾಕಿಕೊಂಡ ಮುಸುಕನ್ನು, ಸರಿಸಿ ಅವರ ಹೃದಯವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದ. ಮುಸ್ಲಿಂ ಕಾದರಂಬರಿಕಾರರ ಕಥಾಪಾತ್ರಗಳು ಬಹು ವಿಶಿಷ್ಟವಾಗಿವೆ. ಸೀಮಿತ ವಾತಾವರಣ, ಪರಿಸರದಲ್ಲಿ ಬೆಳೆದು ಬಂದ ಈ ಕಾದಂಬರಿಕಾರರ ವಸ್ತು ಮತ್ತು ಪಾತ್ರ ಚಿತ್ರಣಗಳು, ಧರ್ಮಾಚರಣೆ, ಸ್ತ್ರೀ ಶೋಷಣೆಯ ಸುತ್ತ ಹೆಣೆದುಕೊಂಡಿವೆ. ಇವರು ಬಡತನ, ಶಿಕ್ಷಣ, ಸಂಪ್ರದಾಯ ವರ್ಗತಾರತಮ್ಯ, ಕುಟುಂಬ ಮದುವೆ ಮುಂತಾದವುಗಳ ಸುತ್ತ ಪಾತ್ರಗಳು ಹೆಣೆದುಕೊಂಡಿವೆ. ಇವರ ಕಾದಂಬರಿಗಳಲ್ಲಿ ಮೇಲುವರ್ಗದಿಂದ, ಕೆಳವರ್ಗದವರೆಗಿನ ನೂರಾರು ಪಾತ್ರಗಳು ಮೈದಾಳಿವೆ. ಅಂತಹ ಪಾತ್ರಗಳಲ್ಲಿ ಕೆಲವು ಪ್ರಾತಿನಿಧಿಕ ಪಾತ್ರಗಳನ್ನು ಇಲ್ಲಿ ಅಧ್ಯಯನಿಸಲಾಗಿದೆ.

*** ಸ್ತ್ರೀ ಪಾತ್ರಗಳು:**

ಕಟ್ಪಾಡಿಯವರ ಕಾದಂಬರಿಗಳ ಅಧ್ಯಯನದಿಂದ ಹಲವು ಸ್ತ್ರೀ ಪಾತ್ರಗಳ ಪರಿಚಯ ನಮಗಾಗುತ್ತದೆ. ಅವರ ಕಾದಂಬರಿಯಲ್ಲಿ ಸ್ತ್ರೀ ಲೋಕದ ಚಿತ್ರಣವನ್ನು ನೋಡಬಹುದು. ಇಲ್ಲಿ

ಹೆಣ್ಣೇ ಪ್ರಧಾನವಾದ ಪಾತ್ರಗಳಲ್ಲಿ ಕಾಣಿಸಿಕೊಂಡಿದ್ದಾಳೆ. ಕಾರಣ ಇವರ ಕಥೆ, ಕಾದಂಬರಿಗಳ ವಸ್ತುವೇ ಹೆಣ್ಣು. ಇವಳ ಸುತ್ತ ಹೆಣೆದಿರುವ ಸನ್ನಿವೇಶಗಳೇ ಕಥೆ ಮತ್ತು ಕಾದಂಬರಿಗಳಾಗಿರುವುದನ್ನು ನೋಡಬಹುದು. ಇವರ ಕಾದಂಬರಿಯಲ್ಲಿ ಹೆಣ್ಣು ಹಲವು ನೆಲೆಗಳಲ್ಲಿ ಕಾಣಿಸಿಕೊಳ್ಳುತ್ತಾಳೆ.

ಕಟ್ಪಾಡಿಯವರ ಮುಖ್ಯ ಉದ್ದೇಶ ಒಂದು ಹೆಣ್ಣು ಸಮಾಜದಲ್ಲಿ ಕುಟುಂಬಗಳು, ನಿಯಮಗಳ, ಆಚಾರ–ವಿಚಾರಗಳ ಧರ್ಮದ ನಡುವೆ ಪುರುಷ ಪ್ರಧಾನವಾದ ಸಮಾಜದ ನಡುವೆ ಸಿಲುಕಿ ಒದ್ದಾಡುವ ಚಿತ್ರಣವನ್ನು ಇವೆಲ್ಲದಕ್ಕಿಂತಲೂ ಮುಖ್ಯವಾಗಿ ಹಸಿವು, ಬಡತನ ಅನಿಷ್ಟ ಸಂಪ್ರದಾಯಗಳು ಮುಂತಾದ ಚಿತ್ರಣವನ್ನು ನೀಡುವುದು ಅಗತ್ಯವಾಗಿದೆ. ಅದರಲ್ಲೂ ಮುಸ್ಲಿಂ ಹೆಣ್ಣಿನ ಬವಣೆಗಳ ಚಿತ್ರಣವೇ ಮುಖ್ಯ. ಕಟ್ಪಾಡಿಯವರ ಬಹುತೇಕ ಎಲ್ಲಾ ಕಥೆ ಕಾದಂಬರಿಗಳಲ್ಲಿಯೂ ಮುಸ್ಲಿಂ ಜನಾಂಗದ ವಿವಿಧ ವಯೋಮಾನದ ವಿವಿಧ ಸ್ಥಿತಿಗತಿಗಳ ಮಹಿಳೆಯರು ಕೇಂದ್ರ ಪಾತ್ರಗಳಾಗಿದ್ದಾಳೆ.

ಕಟ್ಪಾಡಿಯವರ ಮೊದಲ ಕಾದಂಬರಿಯಲ್ಲಿ ಧಾರ್ಮಿಕ ಶೋಷಣೆ, ಹಸಿವು, ಬಡತನ, ಅಜ್ಞಾನ, ಧರ್ಮದ ಹೆಸರಿನಲ್ಲಿ ಪುರುಷರು ಮಹಿಳೆಯನ್ನು ಶೋಷಿಸುವುದು. ಮದುವೆ, ತಲಾಕ್ ವಿದ್ಯಾಭ್ಯಾಸದಲ್ಲಿ ತಾರತಮ್ಯ ಮುಂತಾದ ಶೋಷಣೆಗಳಿಗೆ ಹಾಜಿಮಾ, ಹಪ್ಸಾ, ಜುಲೇಖಾ, ನಫೀಸಾಳಂಥ ಅನೇಕ ಅಸಾಹಯಕ ಹೆಣ್ಣು ಪಾತ್ರಗಳಿದ್ದಾರೆ. ಇವರ ತಾಯಿಯೊಂದಿಗೆ ಕಷ್ಟದ ಜೀವನವನ್ನು ಕಳೆಯುತ್ತಾರೆ. ಬಡವಿ ಹಾಜಿಮಾ ತನ್ನ ಮಕ್ಕಳನ್ನು ಅರಬರಿಗೆ ಕೊಟ್ಟು ಮದುವೆ ಮಾಡುತ್ತಾಳೆ. ಈ ವಿವಾಹಗಳು ಶಾಸ್ತ್ರೋಕ್ತವಾಗಿ ನಡೆಯುವುದಿಲ್ಲ. ಅರಬರು ಕೊಡುವ ಹಣಕ್ಕಾಗಿ ಬಡ ಹೆಣ್ಣು ಮಕ್ಕಳು ಈ ರೀತಿ ವಿವಾಹ ಮಾಡಿಕೊಳ್ಳುತ್ತಾರೆ. ನಫೀಸಾಳ ನಿಕಾಹವು ಮುದುಕ ಅರಬನ ಜೊತೆ ನಿಶ್ಚಯವಾದಾಗ ಅಲ್ಲಿಯ ಯುವಕ ಸಂಘಗಳು ಆ ನಿಕಾಹ್‌ವನ್ನು ವಿರೋಧಿಸುತ್ತಾರೆ. ಆದರೆ ಹಾಜೀಮಾಳು ಆ ಯುವಕ ಸಂಘಗಳ ಯುವಕರಿಗೆ "ಅರಬಿಗಳು ಮದುವೆಯಾಗುವುದನ್ನು ನಾವು ನಿಲ್ಲಿಸ್ತೀವಿ ನಮಗೆ ದಿನಾ ಅನ್ನ ಹಾಕ್ತಿಯಾ ನೀನು? ನನ್ನ ಮಗಳನ್ನು ಮದುವೆಯಾಗ್ತೀಯಾ"[೨] ಎಂದು ಕೇಳುವುದರಿಂದ ಯುವಕರು ಯಾವ ಉತ್ತರ ಕೊಡದೆ ಹೋಗುತ್ತಾರೆ. ಆದರೆ ಆಶ್ಚರ್ಯಕರ ಸಂಗತಿಯೆಂದರೆ ನಫೀಸಾಳನ್ನು ವಿವಾಹವಾಗುತ್ತಿರುವ ಮುದಿ ಅರಬರನು ನಫೀಸಾಳ ತಂದೆಯಾಗಿರುತ್ತಾನೆ. ಇದನ್ನು ಗುರುತಿಸಿದ ಹಾಜಿಮಾ ನಡೆಯುತ್ತಿರುವ ವಿವಾಹವನ್ನು ತಡಯುತ್ತಾಳೆ. ಆ ಅರಬನು ದಶಕಗಳ ಹಿಂದೆ ತಾತ್ಕಾಲಿಕ ವಿವಾಹವಾಗಿ ಹಾಜೀಮಾಳಿಗೆ ತಲಾಖ್ ಕೊಟ್ಟು ತನ್ನ ಮಗಳನ್ನು ಮದುವೆಯಾಗುತ್ತಿರುವ ಸಂದರ್ಭವು ರೊಚ್ಚಿಗೇಡು ಮಾಡುತ್ತದೆ. ಬಡ ಮುಸ್ಲಿಂ ಯುವತಿಯರು ಅರಬರ ಭೋಗದ ಸರಕುಗಳಾಗುವ ದುರಂತವನ್ನು ಶ್ರೀಮಂತರ ಮತ್ತು ಬಡವರ ನಡುವಿನ ಕಂದಕವನ್ನು ತೆರೆದಿಟ್ಟಿದ್ದಾರೆ.

ಅವರ ಇನ್ನೊಂದು ಕಾದಂಬರಿಯ ಸ್ತ್ರೀಪಾತ್ರಗಳು ತಮ್ಮ ತನವನ್ನು ಸ್ಥಾಪಿಸಿಕೊಳ್ಳುವ ಛಾತಿಯವಳಾಗಿದ್ದಾಳೆ. 'ಕಚ್ಚಾದ' ಕಾದಂಬರಿಯಲ್ಲಿ ಮುಸ್ಲಿಂ ಪರಿತ್ಯಕ್ತ ಮಹಿಳೆಯ ಜೀವನದ ಹೋರಾಟವಿದೆ. ನಿಯತ್ತು, ಹಣ, ಉಳಿತಾಯದ ತಂತ್ರಗಳನ್ನು ಅನಾವರಣ ಮಾಡಿದ್ದಾರೆ. ಈ ಕಾದಂಬರಿಯಲ್ಲಿ ಬರುವ ಪಾತ್ರಗಳೆಂದರೆ ಕಚ್ಚಾದ, ಸಫುರಾಬಿ, ಪದ್ಮ, ಸಾರಮ್ಮ ಸಲ್ಮಾ ಇನ್ನೂ ಮುಂತಾದ ಸ್ತ್ರೀಪಾತ್ರಗಳನ್ನು ಕಟ್ಟಿಕೊಟ್ಟಿದ್ದಾರೆ.

ಈ ಕಾದಂಬರಿಯ ನಾಯಕಿ ಕಚ್ಚಾದ ಅವಳ ಗಂಡ ಎರಡು ಮಕ್ಕಳು ಹುಟ್ಟಿದ ನಂತರ ಕೆಟ್ಟ ಹವ್ಯಾಸಗಳ ದಾಸನಾಗಿ ಎಂದಾದರೊಮ್ಮೆ ಮನೆಗೆ ಬಂದು ಹೋಗುತ್ತಿರುತ್ತಾನೆ. ಇದರಿಂದ ಮಕ್ಕಳು ಈತನ ಪರಿಚಯವನ್ನು ತಪ್ಪಿಸಿಕೊಳ್ಳುತ್ತವೆ. ಒಮ್ಮೆ ಈತ ಹಿರಿಯ ಮಗನನ್ನು ಮುದಿಸಲು ಹೋದಾಗ ತಂದೆಯಿಂದ ತಪ್ಪಿಸಿಕೊಳ್ಳಲು ಹೋಗಿ ಹೊಳೆ ಪಾಲಾಗುತ್ತಾನೆ. ಈ ದುಃಖವನ್ನು ಸಹಿಸದ ಕಚ್ಚಾದಳು ತನ್ನ ಗಂಡನನ್ನು ತರಾಟೆಗೆ ತೆಗೆದುಕೊಂಡ ಸಂದರ್ಭದಲ್ಲಿ ಆತ ಮನೆಯಿಂದ ಪಲಾಯನಗೈಯುತ್ತಾನೆ. ಕಚ್ಚಾದಳ ಮುಂದಿನ ಜೀವನವು ಕಷ್ಟಕರವಾಗುತ್ತದೆ. ಮನೆಯಲ್ಲಿ ದುಡಿಯುವ ಗಂಡಸರಿರಲಿಲ್ಲವಾದರೂ ಕಚ್ಚಾದ ಯಾರ ಹಂಗಿನಲ್ಲಿ ಇರಲು ಬಯಸುವುದಿಲ್ಲ. ಸ್ವತಂತ್ರವಾಗಿ ದುಡಿದು ಕೂಲಿ ಮಾಡುತ್ತ ಬದುಕು ಸಾಗಿಸುತ್ತಾಳೆ. ಗಂಡನಿಲ್ಲದ ಕಚ್ಚಾದಳಿಗೆ ಅವಳ ಬಾಯಿಯೇ ಬಂಡವಾಳವಾಗುತ್ತದೆ. ಅವಳು ಹರಿತವಾದ ಮಾತುಗಳಿಂದ ಎಲ್ಲರ ಬಾಯಿಮುಚ್ಚಿಸುತ್ತಾಳೆ. ಕಚ್ಚಾದಳ ಚಾಲಕಿತನಕ್ಕೆ, ಬುದ್ಧಿವಂತಿಕೆಗೆ ಎಲ್ಲರೂ ಗೌರವ ಕೊಡುತ್ತಿದ್ದರು. ಒಮ್ಮೆ ಆ ಊರಿನ ಸಾಹುಕಾರ ಕೂಲಿಗಾಗಿ ದಡ್ಡುಭತ್ತ ಕೊಟ್ಟದ್ದಕ್ಕಾಗಿ "ಏ ಸಾವುಕಾರ, ನಾನು ಒಂದುವಾರ ನಿನ್ನ ಗದ್ದೆಯಲ್ಲಿ ಕೆಲ್ಸ ಮಾಡಿದ್ದಕ್ಕೆ ನೀನು ಕೂಲಿಕೊಟ್ಟದ್ದು ಇದೇ ಏನು ದಡ್ಡುಭತ್ತ? ನಾಳೆ ಆಖಿರತ್‌ನಲ್ಲಿ ನೀನು ಸಾಹುಕಾರ ಹಾಜಿಯಾರು ಅಂತ ಅಲ್ಲಾಹ ಸುಮ್ನೆ ಬಿಟ್ಟಾನೇನು?"[೩] ಎಂದು ಊರು ತುಂಬಾ ರಂಪ ಮಾಡಿ ಒಳ್ಳೆಯ ಭತ್ತವನ್ನು ಪಡೆದಿದ್ದಳು. ಹೀಗೆ ಕಟ್ಪಾಡಿಯವರ ಕಾದಂಬರಿಗಳಲ್ಲಿ ಪುರುಷ ಪ್ರಾಧಾನ್ಯತೆಯ ನೆಲೆಯಲ್ಲಿ ಮುಸ್ಲಿಂ ಧರ್ಮದಲ್ಲಿರುವ ವಿವಾಹ ಪದ್ಧತಿ, ತಲಾಕ್ ವ್ಯವಸ್ಥೆ ವರ್ಗ ತಾರತಮ್ಯ ನೆಲೆಯಲ್ಲಿ ಹೆಣ್ಣನ್ನು ಶೋಷಿಸುತ್ತಿರುವ ಪ್ರಧಾನ ಮೂಲವಾಗಿರುವುದನ್ನು ಗುರುತಿಸಬಹುದು.

ಇವರ ಕಾದಂಬರಿಯಲ್ಲಿ ಅವಿದ್ಯಾವಂತ ಮಹಿಳೆಯರು ಕಂಡುಬರುತ್ತಾರೆ. ಮದರಸಗಳಲ್ಲಿನ ಶಿಕ್ಷಣವನ್ನು ಮಾತ್ರ ಅಂದರೆ ಧಾರ್ಮಿಕ ಶಿಕ್ಷಣವನ್ನು ಮಾತ್ರ ನೀಡಲಾಗುತ್ತದೆ. ಆದರೆ ಫಕೀರ ಮುಹಮ್ಮದ್ ಕಟ್ಪಾಡಿಯವರ ಕಾದಂಬರಿಗಳಲ್ಲಿ ಹಾಜೀಮ ತನ್ನ ಮಗ ಮಮ್ಮುಟಿಯನ್ನು ಕಷ್ಟಪಟ್ಟು ಎಸ್.ಎಸ್.ಎಲ್.ಸಿ ತನಕ ಪಟ್ಟು ಹಿಡಿದು ವಿದ್ಯಾಭ್ಯಾಸ ಮಾಡಿಸುತ್ತಾಳೆ. "ತನ್ನ ಮಗ

ಕಟ್ಟಕಡೆಗೆ ಸರಕಾರಿ ಗುಮಾಸ್ತನಾದರೂ ಆಗಬೇಕೆನ್ನುವುದು ಅವಳ ಕನಸಾಗಿತ್ತು"[೪] ಎನ್ನುವಲ್ಲಿ ಕಡಲತೀರದ ಗುಡಿಸಲುಗಳಲ್ಲಿ ವಾಸಿಸುವ ಹಾಜೀಮ ತನ್ನ ಮಗ ಓದಬೇಕು ಉದ್ಯೋಗಕ್ಕೆ ಸೇರಬೇಕು ಎಂಬ ಹಂಬಲ ವ್ಯಕ್ತವಾಗಿದೆ. ಆದರೆ ಅದೇ ತನ್ನ ಹೆಣ್ಣು ಮಕ್ಕಳಾದ ಜಿಲೇಖಾ, ಹಪ್ಸಾರು, ನಫೀಸಾಳನ್ನು ಶಾಲೆಗೆ ಕಳುಹಿಸುವ ವಿಚಾರದಲ್ಲಿ ತಲೆಕೆಡಿಸಿಕೊಳ್ಳುವುದಿಲ್ಲ. ಕುಟುಂಬದಲ್ಲಿರುವ ಬಡತನ, ದಾರಿದ್ರ್ಯ ಒಂದು ಕಾರಣವಾದರೆ "ಹೆಣ್ಣಿಗೆ ವಿದ್ಯಾಭ್ಯಾಸದ ಅಗತ್ಯ ಇಲ್ಲವೇ ಇಲ್ಲ. ಧಾರ್ಮಿಕ ವಿದ್ಯಾಭ್ಯಾಸ ಮಾತ್ರ ಕೊಡಿಸಿದರೆ ಸಾಕು"[೫] ಎಂಬ ಸಾಂಪ್ರದಯಿಕ ಧೋರಣೆ ಮತ್ತೊಂದು ಕಾರಣ.

ಕಡುಬಡತನದಿಂದ ಸೈದುಕೋಯಾರ ಮನೆಗೆ ಹಾಜೀಮಾ ತನ್ನ ಮಗಳಾದ ನಫೀಸಾಳನ್ನು ಕೆಲಸಕ್ಕೆ ಕಳುಹಿಸುತ್ತಾಳೆ. ಕಟ್ಪಾಡಿಯವರ ಕಾದಂಬರಿಯಲ್ಲಿ ಸಂಪ್ರದಾಯಿಕತೆ ಮತ್ತು ಆಧುನಿಕತೆಯ ಮುಖಾಮುಖಿಯು ಆಗಿದೆ. ಇವರ ಕಾದಂಬರಿಯಲ್ಲಿ ತಾಯಿಯ ಪಾತ್ರದಲ್ಲಿ ಹಾಗೂ ಮಗಳ ಪಾತ್ರಗಳಲ್ಲಿ ಹೆಣ್ಣು ಕಾಣಿಸಿಕೊಂಡಿದ್ದಾಳೆ. ಮುಸ್ಲಿಂ ಸಮಾಜದ ಬದುಕು, ಧರ್ಮದ ನಿಯಮಗಳಡಿಯಲ್ಲಿಯೇ ನಡೆಯುವಂಥದ್ದು. ಆದರೆ ಈ ನಿಯಮಗಳು ಹೆಣ್ಣಿನ ಮೇಲೆ ಹೆಚ್ಚಾಗಿ ಬೀಳುತ್ತವೆ. ಘೋಷಾಹಾಕಬೇಕಾದ ಅನಿವಾರ್ಯತೆ, ಚಲನವಲನಗಳಲ್ಲಿ ನಿರ್ಬಂಧ ಪುರುಷ ಪ್ರಾದನ್ಯತೆ, ತಲಾಕ್ ಕೊಡುವುದರಲ್ಲಿ ಗಂಡಸಿನ ಮೇಲುಗೈ ಇವೆಲ್ಲವೂ ಹೆಂಗಸಿನ ಬಾಳನ್ನು ತೀರಾ ನಿರ್ಬಂಧಿಸುತ್ತವೆ. ಇವು ಸಾಲದು ಎಂಬಂತೆ ಬಡತನ ಕಾರಣಕ್ಕಾಗಿ ಹಾಜೀಮಾ, ಹಫ್ಸಾ, ಜುಲೇಖಾ ಅರಬ್ಬರನ್ನು ಮದುವೆಯಾಗಿ ತಮ್ಮ ಜೀವನವನ್ನು ಅಂದಕಾರದಲ್ಲಿ ತಳ್ಳಿಕೊಳ್ಳುತ್ತಾರೆ. ಇವರು ಕೊಡುವ ಪುಡಿಗಾಸಿನಿಂದ ಕುಟುಂಬದ ನಿರ್ವಹಣೆ ಇವರಿಗೆ ಗಂಡಸರ ನೆರವಿಲ್ಲದಿರುವುದು ೨–೩ ತಿಂಗಳ ನಂತರ ಅರಬ್ಬ ಗಂಡನು ತಲಾಖ್ ಹೇಳಿ ಹೋದ ಮೇಲೆ ಕುಟುಂಬವನ್ನು ನಡೆಸಲು ಹಣವಿಲ್ಲದೆ ಇರುವಾಗ ಸೈದುಕೋಯಾರ ಮನೆಗೆಲಸಕ್ಕೆ ಹೋದ ನಫೀಸಾಳು ತರುವ ಪುಡಿಗಾಸಿನಿಂದ ಗಂಜಿಯೋ ಮಾಡಿಕೊಂಡು ಬದುಕುವ ಹೀನಾಯ ಸ್ಥಿತಿ ಈ ಗುಡಿಸಲುಗೇರಿಯ ಜನಗಳದ್ದು.

ಹೀಗೆ ಬದುಕಿನ ಹಲವು ಮುಖಗಳನ್ನು ಹಾಗೂ ಹೆಣ್ಣಿನ ಜೀವನದಲ್ಲಿ ಆಗುತ್ತಿರುವ ಬದಲಾವಣೆಯನ್ನು ವ್ಯವಸ್ಥೆಯ ನಿಯಮಗಳನ್ನು ಬದಲಾಗುತ್ತಿರುವ ಹೆಣ್ಣಿನ ನಿಲುವುಗಳನ್ನು ಕಟ್ಪಾಡಿಯವರು ತಮ್ಮ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ತನ್ನ ಬದುಕನ್ನೇ ಮರೆತು ತನಗೆ ಯಾವುದೇ ರೀತಿಯ ವ್ಯಕ್ತಿತ್ವಗಳು ಆಸೆಗಳು ಇಲ್ಲದಂತೆ ಬದುಕುವ ಭಾರತೀಯ ಸ್ತ್ರೀ ಮಾದರಿಗಳ ವ್ಯವಸ್ಥೆಗೆ ಕಟ್ಪಾಡಿಯವರಲ್ಲಿ ಪ್ರಶ್ನೆಗಳಿವೆ. ಗಂಡಿಗೊಂದು ಮತ್ತು ಹೆಣ್ಣಿಗೊಂದು ನ್ಯಾಯ ವ್ಯವಸ್ಥೆ

ಸವಲತ್ತುಗಳನ್ನು ಮಾಡಿ ವಂಚಿಸುತ್ತಿರುವ ಮನೋಧರ್ಮದ ವಿರುದ್ಧ ಇವರ ಕಾದಂಬರಿಗಳು ಬೆಳಕು ಚಲ್ಲುತ್ತವೆ. ಅದರಲ್ಲಿಯೂ ಇವರ ಕಾದಂಬರಿಗಳಲ್ಲಿ ಅನಾವರಣಗೊಂಡಿರುವ ಸ್ತ್ರೀಪಾತ್ರಗಳು ಕೊನೆಕೊನೆಗೆ ಜಾಗೃತಗೊಳ್ಳುವಂತಹವು.

* **ಪುರುಷ ಪಾತ್ರಗಳು:**

ಕನ್ನಡಕ್ಕೆ ಅತ್ಯುತ್ತಮ ಕಾದಂಬರಿಗಳನ್ನು ನೀಡಿದ ಕಾದಂಬರಿಕಾರರು ತಮ್ಮ ಕಾದಂಬರಿಯಲ್ಲಿ ಮುಸ್ಲಿಂ ಸಂವೇದನೆಗಳಿಗನುಸಾರವಾಗಿ ಪುರುಷರ ವಿವಿಧ ಮುಖಗಳನ್ನು ದರ್ಶಿಸಿದ್ದಾರೆ.

ಸರ್ವಧರ್ಮಗಳ ಸಮಾಜದಲ್ಲಿ ಪ್ರತಿರಂಗದ ಕೌಟುಂಬಿಕ ಜೀವನದಲ್ಲಿ ಪುರುಷನ ಪಾತ್ರ ಪ್ರಧಾನವಾಗಿದೆ. ಸಾಮಾಜಿಕ ನೀತಿ–ನಿಯಮಗಳ ರಚನೆ, ಕಟ್ಟುಪಾಡುಗಳನ್ನು ಸಂಪ್ರದಾಯ, ಆಚರಣೆಗಳನ್ನು ರಚಿಸಿಕೊಂಡು ಇಡೀ ಸಮಾಜವನ್ನು ಆಳುವವನು ಪುರುಷನಾಗಿದ್ದಾನೆ. ಸದಾ ದ್ವೇಷ, ಅಸೂಯೆ, ಮತ್ಸರಗಳಿಂದ ತುಂಬಿದ ಸಮಾಜಗಳಲ್ಲಿ ಕೋಮುಗಲಬೆಗಳಿಗೆ, ಅನಗತ್ಯ ಸಂಘರ್ಷಗಳಿಗೆ ಅವಕಾಶಕೊಡದೆ, ಸಮುದಾಯವನ್ನು ತಿದ್ದಿತಿಡಿ ಸನ್ಮಾರ್ಗದಲ್ಲಿ ನಡೆಯುವಂತೆ ಸಮಾಜದ ಸಮತೋಲನಕ್ಕಾಗಿ ಶ್ರಮಿಸಬೇಕಾದುದು ಪುರುಷನ ಕರ್ತವ್ಯವಾಗಿದೆ. ಅಂತಹ ಪುರುಷ ಪ್ರಧಾನ ಪಾತ್ರಗಳನ್ನು ಮುಸ್ಲಿಂ ಲೇಖಕರ ಕಾದಂಬರಿಗಳಲ್ಲಿ ಕಾಣಬಹುದಾಗಿದೆ.

ಕಟ್ಪಾಡಿಯವರ ಕಾದಂಬರಿಗಳ ಅಧ್ಯಯನದಿಂದ ನನಗೆ ಹಲುವ ಪುರುಷಪಾತ್ರಗಳ ಪರಿಚಯವಾಗಿದೆ. ಕಟ್ಪಾಡಿಯವರ ಕಾದಂಬರಿಗಳಲ್ಲಿ ಮೂಡಿಬಂದಿರುವ ಪುರುಷ ಪಾತ್ರಗಳನ್ನು ಹಾಗೂ ಕೆಲವೊಂದು ವಿವರಗಳನ್ನು ನೋಡಿದರೆ ಅದು ಮುಸ್ಲಿಂ ಧರ್ಮದಲ್ಲಿ ಇರುವ ನ್ಯೂನ್ಯತೆಗಳಿಗೆ, ಆಚಾರಗಳಿಗೆ ಕರುಣಾಜನಕ ಪದ್ಧತಿಗಳಿಗೆ ಹಿಡಿದ ಕನ್ನಡಿಯಂತಿವೆ. ಕಟ್ಪಾಡಿಯವರು ತಮ್ಮ ಕಾದಂಬರಿಯಲ್ಲಿ ಮುಸ್ಲಿಂ ಹೆಣ್ಣು ಮಕ್ಕಳು ಪುರುಷ ದಬ್ಬಾಳಿಕೆಗೆ ತುತ್ತಾಗಿ ಮಾನಸಿಕವಾಗಿ ಬಳಲುವ ಅಷ್ಟೇ ಅಲ್ಲದೆ ತಮ್ಮ ಸ್ವಾತಂತ್ರ್ಯದಲ್ಲಿ ಬದುಕಲು ಆಗದೆ ಇರುವಂತಹ ಸ್ಥಿತಿಯ ಚಿತ್ರಣವನ್ನು ಕಾಣಬಹುದಾಗಿದೆ. ಆಂದರೆ ಪಿತೃಪ್ರಾಧನ ವ್ಯವಸ್ಥೆಯಲ್ಲಿ ಹೆಚ್ಚಿನ ಸ್ಥಾನಮಾನಗಳ ಚಿತ್ರಣ ಕಟ್ಪಾಡಿ ಕಾದಂಬರಿಗಳಲ್ಲಿ ಅನಾವರಣಗೊಂಡಿದೆ.

ನಮ್ಮ ದೇಶ ಪುರುಷ ಪ್ರಧಾನವಾದ ದೇಶ. ಇಲ್ಲಿ ಹೆಣ್ಣಿಗೆ ಹೋಲಿಸಿ ನೋಡಿದರೆ ಗಂಡಿಗೆ ಹೆಚ್ಚು ಬೆಲೆ, ಪ್ರಾಮುಖ್ಯತೆ ಅಷ್ಟೇ ಅಲ್ಲ ಎಲ್ಲಾ ಜಾತಿ, ವರ್ಗ ಸಮಾಜದಲ್ಲೂ ಪುರುಷನ ಆಳ್ವಿಕೆ, ದಬ್ಬಾಳಿಕೆ ನಡೆಯುತ್ತಿರುವುದನ್ನು ನಾವು ನೋಡಬಹುದು.

ಕಟ್ಪಾಡಿಯವರ ಕಾದಂಬರಿಯಲ್ಲಿ ಹಾಜಿಮಾ ತನ್ನ ಮಗ ಮಮ್ಮುಟಿಯನ್ನು ಕಷ್ಟಪಟ್ಟು ಎಸ್.ಎಸ್.ಎಲ್.ಸಿ ತನಕ ಪಟ್ಟು ಹಿಡಿದು ವಿದ್ಯಾಭ್ಯಾಸ ಮಾಡಿಸುತ್ತಾಳೆ. "ತನ್ನ ಮಗ ಕಟ್ಟಕಡೆಗೆ

ಸರಕಾರಿ ಗುಮಾಸ್ತನಾದರೂ ಆಗಬೇಕೆನ್ನುವುದು ಅವಳ ಕನಸಾಗಿತ್ತು"[೬] ಆದರೆ ಅದೇ ತನ್ನ ಹೆಣ್ಣು ಮಕ್ಕಳಾದ ಜುಲೇಖಾ, ಹಪ್ಸಾರು, ನಫೀಸಾಳನ್ನು ಶಾಲೆಗೆ ಕಳುಹಿಸುವ ವಿಚಾರದಲ್ಲಿ ತಲೆಕೆಡಿಸಿಕೊಳ್ಳುವುದಿಲ್ಲ. ಕುಟುಂಬದಲ್ಲಿರುವ ಬಡತನ, ದಾರಿದ್ರ್ಯ ಒಂದು ಕಾರಣವಾದರೆ "ಹೆಣ್ಣಿಗೆ ವಿದ್ಯಾಭ್ಯಾಸದ ಅಗತ್ಯ ಇಲ್ಲವೇ ಇಲ್ಲ. ಧಾರ್ಮಿಕ ವಿದ್ಯಾಬ್ಯಾಸ ಮಾತ್ರ ಕೊಡಿಸಿದರೆ ಸಾಕು" ಎಂಬ ಸಾಂಪ್ರದಾಯಿಕ ಧೋರಣೆ ಮತ್ತೊಂದು ಕಾರಣ ಹೀಗೆ ಗಂಡಿಗೆ ಹೆಚ್ಚು ಬೆಲೆ ಕೊಡಲಾಗುತ್ತದೆ. ಸೈದುಕೋಯಾರು ಸಹ ಸಲೀಮ್‌ನಿಗೆ ಎಂ.ಎ.ವರೆಗೆ ವಿದ್ಯಾಭ್ಯಾಸ ಕೊಡಿಸಿದರೆ ತನ್ನ ಮಗಳಿಗೆ ವಿದ್ಯಾಬ್ಯಾಸ ಕೊಡಿಸುವುದಿಲ್ಲ. ಇವೆಲ್ಲಾ ಕಾರಣದಿಂದ ತಿಳಿಯುವುದೇನೆಂದರೆ ಸಮಾಜದಲ್ಲಿ ಹೆಣ್ಣಿಗಿಂತ ಗಂಡಿಗೆ ಬೆಲೆ ಜಾಸ್ತಿ. ಇದನ್ನು ಸಾಕಷ್ಟು ಹೆಣ್ಣು ಮಕ್ಕಳು ತಿಳಿದು ಏನೂ ಮಾಡಲಾಗದ ಸ್ಥಿತಿಯಲ್ಲಿ ಬದುಕುತಿರುವುದನ್ನು ನೋಡಬಹುದು. ಕಟ್ಪಾಡಿಯವರ ಕಾದಂಬರಿಯಲ್ಲಿ ಕಾಣುವ ಪುರುಷ ಜಗತ್ತು ಕೇವಲ ಊಹಪೋಹಗಳಲ್ಲ. ಸ್ವತಃ ಮುಸ್ಲಿಂ ಧರ್ಮದ ಸಮುದಾಯಗಳಿಂದ ಬಂದಿರುವ ನನಗೆ ಕಟ್ಪಾಡಿ ಅವರ ಕಾದಂಬರಿ ತೀರಾ ಹತ್ತಿರವೆನಿಸುತ್ತದೆ. ಇವೆಲ್ಲವುಗಳನ್ನು ಅವಲೋಕಿಸಿದಾಗ ಬೇರೆ ಧರ್ಮ ಹಾಗೂ ಸಮಾಜದಲ್ಲಿರುವ ಪುರುಷ ದಬ್ಬಾಳಿಕೆ, ಶೋಷಣೆ ಅವಹೇಳನಗಳೆಲ್ಲವೂ ಮುಸ್ಲಿಂ ಧರ್ಮದಲ್ಲಿ ಅಧಿಕವಾಗಿವೆ ಎಂದು ಹೇಳಬಹುದು. ಇವೆಲ್ಲವುಗಳನ್ನು ಇವರ ಕಾದಂಬರಿಗಳಲ್ಲಿ ಬರುವ ನಿದರ್ಶನಗಳ ಮೂಲಕ ತಿಳಿಯಬಹುದು. ಇವರ ಕಾದಂಬರಿಗಳು ತನ್ನದೇ ಆದ ವೈಶಿಷ್ಟ್ಯತೆಯನ್ನು ಪಡೆದಿವೆ. ಮುಸ್ಲಿಂ ಧರ್ಮದಲ್ಲಿ 'ಹೆಂಡತಿಯನ್ನು ಬಿಗಿ ಮುಷ್ಟಿಯಲ್ಲಿಟ್ಟುಕೊಳ್ಳಲು ಗಂಡ ಕಂಡುಕೊಂಡ ಅಸ್ತ್ರವೇ ಈ ತಲಾಕ್ ಪದ್ಧತಿ' ಇಂತಹ ಪದ್ಧತಿಯ ಅನಾವರಣ ಕಟ್ಪಾಡಿಯವರ ಕಾದಂಬರಿಗಳಲ್ಲಾಗುತ್ತದೆ. ಮುಸ್ಲಿಂ ಸಮಾಜದಲ್ಲಿ ವಿವಾಹಿತ ಹೆಣ್ಣನ್ನು ಶೋಷಿಸುವ ಗಂಡು ತಲಾಖ್ ಪದ್ಧತಿಯನ್ನು ಅಸ್ತ್ರವಾಗಿ ಬಳಸಿಕೊಳ್ಳುತ್ತಾನೆ.

ಪಿತೃಪ್ರಧಾನ ಎನ್ನುವುದು ಗಾಳಿಯಲ್ಲಿ ಇರುವಂಥಹದಲ್ಲ. ಅದು ವರ್ತಮಾನ ಸಂಗತಿಗಳೊಡನೆ ತಳಕು ಹಾಕಿಕೊಂಡು ಕಾಲ, ದೇಶ ಸಂಸ್ಕೃತಿಗಳಿಗೆ ತಕ್ಕಂತೆ ಬದಲಾಗುತ್ತಿರುವಂತ ಕಟ್ಪಾಡಿ ಕಾದಂಬರಿಗಳಲ್ಲಿ ವರ್ಣಿಸಲ್ಪಟ್ಟ ಪುರುಷ ಪ್ರಧಾನ ವ್ಯವಸ್ಥೆಯೂ ಅಷ್ಟೇ, ತನ್ನ ಇರುವಿನ ವಾಸ್ತವಾಂಶಗಳೊಡನೆ ಹಣೆದುಕೊಂಡಿದೆ.

ಕಟ್ಪಾಡಿ ಅವರ ಕಾದಂಬರಿಗಳಿಗೆ ದಕ್ಷಿಣ ಕನ್ನಡ, ಕೇರಳ, ಉಡುಪಿ ಗಡಿಯ ಜನರ ಸಂಕಷ್ಟದ ಬದುಕು ಹಿನ್ನೆಲೆಯಾಗಿದೆ. ಬಡತನ ಅನಕ್ಷರತೆ, ಮೌಢ್ಯಗಳಂಥಂಹ, ಪರಿಸರ ಅದು ಇದರೊಂದಿಗೆ ಮುಸಲ್ಮಾನರ ಬದುಕು, ಧಾರ್ಮಿಕ ಆಚರಣೆ, ಮೌಲ್ವಿಗಳ ಹೇಳಿಕೆಯಂತೆ ಸಾಗುವಂತಹದ್ದು

ಹೀಗಾಗಿ ಇವರ ಕಾದಂಬರಿಗಳಲ್ಲಿ ಕಾಣುವ ಪಿತೃಪ್ರಧಾನ ವ್ಯವಸ್ಥೆಯೂ ಬಡತನ ಧರ್ಮ ಮತ್ತು ಅನಕ್ಷರತೆಗಳೊಡನೆ ಒಪ್ಪಂದ ಮಾಡಿಕೊಂಡಿದೆ. ಇದೆಲ್ಲವನ್ನು ಕಟ್ಪಾಡಿಯವರು ತಮ್ಮ ಗಾಢವಾದ ಸ್ತ್ರೀ ಸಂವೇದನೆಯೊಡನೆ ಕಾದಂಬರಿ ರೂಪಕ್ಕಿಳಿಸಿದ್ದಾರೆ. ಪುರುಷಾಧಿಕಾರ ಎನ್ನುವುದು ಧರ್ಮ, ದೇಶ, ವ್ಯತ್ಯಾಸಗಳನ್ನು ಮೀರಿರುವಂತಹದು. ಇಲ್ಲಿ ಮುಸ್ಲಿಂ ಧರ್ಮದ ಸ್ತ್ರೀಯರ ಮೇಲಿನ ಕಟ್ಟುಪಾಡುಗಳಿಂದಾಗಿ ಬೇರೆಯೇ ಆದ ಒಂದು ಸ್ವರೂಪ ತಳೆಯುವುದನ್ನು ನೋಡಬಹುದು. ಕೇಲವು ಉದಾಹರಣೆಗಳ ಮೂಲಕ ಇದನ್ನು ಸ್ಪಷ್ಟಪಡಿಸುತ್ತೇನೆ. ಸರಕುಗಳು, ಕಚ್ಚಾದ ಕಾದಂಬರಿಗಳಲ್ಲಿ ತಂದೆ, ಗಂಡಂದಿರಿಗೆ ಮತ್ತು ಧರ್ಮಗುರುಗಳಿಗೆ ಅತ್ಯಂತ ಹೆಚ್ಚಿನ ಅಧಿಕಾರವಿದೆ. ಹೆಣ್ಣು ಮಕ್ಕಳು ವಸ್ತ್ರಸಂಹಿತೆ ಹಾಕುವ ವಿಷಯದಿಂದ ಹಿಡಿದು 'ತಲಾಕ್'ನ ವಿಷಯಗಳವರೆಗೆ ಪ್ರಮುಖ ನಿರ್ಧಾರಗಳನ್ನು ತೆಗೆದುಕೊಳ್ಳುವವರು ಗಂಡಂದಿರು, ಅಪ್ಪಂದಿರು ಮತ್ತು ಮೌಲ್ವಿಗಳು ಒಟ್ಟಾರೆಯಾಗಿ ಪುರುಷ ಸಮಾಜದ ಧ್ವನಿ ಇಲ್ಲಿದೆ.

ಕಟ್ಪಾಡಿಯವರ 'ಕಚ್ಚಾದ' ಎಂಬ ಕಾದಂಬರಿಯಲ್ಲಿ ಶ್ರೀಮಂತ ಹಾಜಿಯಾರರ ಮನೋಧರ್ಮವನ್ನು ನೋಡಬಹುದು.

"ಒಂದು ವಾರ ಗದ್ದೆಯಲ್ಲಿ ಕೂಲಿ ಮಾಡಿದ್ದಕ್ಕೆ ದಡ್ಡುಭತ್ತ ಕೊಟ್ಟಿರುವೆಯಲ್ಲ. ದುಡಿದವರಿಗೆ ಮೋಸ ಮಾಡುವುದೇ? ಹಣ ಮಾಡೋ ಒಂದಾ....ಎ ಮುದ್ಕಿ ಪರ್ದಾ ಮಾಡದ, ಜಾಹಿಲಿ ಹೆಂಗಸೇ ನಿನಗೆ, ಅಲ್ಲಾ ಅಖಿರತ್‌ನ ನೆನಪೇ?[೭]

ಈ ಮೇಲಿನ ಮಾತುಗಳಿಂದ ದೌರ್ಜನ್ಯ ಪೂರಿತ ಗಂಡಿನ ಮನೋಧರ್ಮವನ್ನು ಕಾಣಬಹುದು. ಇಲ್ಲಿ ಗಂಡು ಹೆಣ್ಣಿಗೆ ದೈಹಿಕವಾಗಿ ಹಿಂಸಿಸಿ ಅವಳಿಗೆ ಕೂಲಿ ಕೂಡದಿರುವ ಪರಿಯನ್ನು ನೋಡಬಹುದು. ಗಂಡು ಎಂದಿಗೂ ಹೆಣ್ಣನ್ನು ಮನುಷ್ಯಳ ರೀತಿ ಪರಿಗಣಿಸಲೇ ಇಲ್ಲ ಅವಳನ್ನು ವಸ್ತುವಿನ ಹಾಗೆ ಕಂಡಿರುವುದನ್ನು ನೋಡಬಹುದು. ಬೇಕಾದಾಗ ಬಳಸಿಕೊಂಡು ಬೇಡವಾದಾಗ ಆಕೆಗೆ ಕಸದ ರೀತಿಯಲ್ಲಿ ತಳ್ಳಿ ಹಾಕುತ್ತಿದ್ದನು. ಇದೆ ತರದ ಸಾರಾ ಅವರ ಚಪ್ಪಲಿಗಳು ನಿದರ್ಶನವನ್ನು ನೋಡಬಹುದು. ತಂದೆಯಾದ ಹಸನ ಬ್ಯಾರಿ ಸ್ವತಃ ತನ್ನ ಅಳಿಯನಿಗೆ ಹೀಗೆ ಉಪದೇಶಿಸುತ್ತಾನೆ.

"ಹೆಂಗಸರನ್ನು ಕಾಲಿನ ಚಪ್ಪಲಿಯಂತೆ ಬಳಸಿಕೊಳ್ಳಬೇಕು. ಬೇಕಾದಾಗ ಉಪಯೋಗಿಸಿ ಬೇಡವಾದಾಗ ಮೂಲೆಯಲ್ಲಿ ಬಿಟ್ಟು ಬಿಡಬೇಕು. ಅದನ್ನು ಬಿಟ್ಟು ತಲೆಯ ಮೇಲಿಟ್ಟುಕೊಂಡರೆ ಹೇಗೆ ಚಪ್ಪಲಿಯನ್ನು ಎಲ್ಲಿಡಬೇಕೋ ಅಲ್ಲೇ ಇಡಬೇಕು!"[೮] ಹೀಗೆ ಹೆಣ್ಣಿನ ಮೇಲೆ ಪುರುಷ ಪ್ರಧಾನ ಸಮಾಜವು ದಬ್ಬಾಳಿಕೆ ಮಾಡುವುದನ್ನು ಕಾಣಬಹುದು. ಹೀಗೆ ಕಟ್ಪಾಡಿಯವರ

ಕಾದಂಬರಿಯಲ್ಲಿ ಹೆಣ್ಣು ಅರಬ್ಬರಿಗೆ ಬಲಿಪಶುವಾಗುವುದು ಗಂಡು ಹೆಣ್ಣನ್ನು ಸರಕುಗಳಂತೆ ನೋಡುತ್ತಿದ್ದನು. ಇವಳಿಗೆ ಪ್ರತಿಯೊಂದು ಹಂತದಲ್ಲಿಯೂ, ವಲಯದಲ್ಲಿಯೂ, ಧರ್ಮದ ಹೆಸರಿನಲ್ಲಿ ಆಚಾರ ನಿಯಮಗಳ ಹೆಸರಿನಲ್ಲಿ ಘೋಷದ ಪರದೆಯಲ್ಲಿ ಕಟ್ಟಿ ಬಂಧಿಸಿರುವುದನ್ನು ನೋಡಬಹುದಾಗಿತ್ತು. ಇವತ್ತಿಗೂ ಮುಸ್ಲಿಂ ಕುಟುಂಬಗಳಲ್ಲಿ ಈ ರೀತಿ ಬದುಕುತ್ತಿರುವ ಎಷ್ಟೋ ಹೆಣ್ಣು ಮಕ್ಕಳನ್ನು ನೋಡಬಹುದಾಗಿದೆ. ಇದಕ್ಕೆ ಉದಾಹರಣೆಯಾಗಿ ಸಾರಾ ಅವರ ಚಪ್ಪಲಿ ಕತೆಯಿಂದ ನೋಡಬಹುದು.

"ಏನು? ವಿಮಾನ ನಿಲ್ದಾಣಕ್ಕೆ ಬರ್‍ತಾಳಾ ನಿನ್ನ ಮಗಳು? ಅಲ್ಲಿ ಅಷ್ಟು ಜನ ಗಂಡಸರ ಮಧ್ಯೆ ಇವಳು ಹೋಗುವುದೇ ಏನು ಮಾನ ಮರ್ಯಾದೆ ಎಲ್ಲಾ ಬಿಟ್ಟು ಬಿಟ್ಟಳಾ"[೯] ಎಂದು ಕೇಳುತ್ತಾನೆ. ಈ ಸಮಾಜದಲ್ಲಿ ಹೆಣ್ಣಿನ ಬದುಕು ಹೇಗೆ ಸಾಗುತ್ತದೆ ಎಂಬುದನ್ನು ಮೇಲಿನ ಮಾತುಗಳಿಂದ ಗುರುತಿಸಬಹುದು. ಅಷ್ಟೇ ಅಲ್ಲದೇ ಇವೆಲ್ಲವನ್ನು ಹೆಣ್ಣು ಒಪ್ಪಿಕೊಂಡು ಏನೂ ಮಾಡಲಾಗದೆ ಬದುಕುತ್ತಿರುವ ಸ್ಥಿತಿ, ಗಂಡಸರ ಧರ್ಮಪ್ರಾಧಾನ್ಯ ಎಷ್ಟಿರುತ್ತದೆಂದರೆ ಸ್ತ್ರೀಯರ ಮನಸ್ಸು ಸಹ ಸ್ತ್ರೀ ವಿರೋಧಿ ನೆಲೆಯಲ್ಲೇ ಯೋಚಿಸುತ್ತದೆ ಎಂಬುದಕ್ಕೆ 'ಕಚ್ಚಾದ'ಳ ಅತ್ತೆ ಸೂಫೀ ಬ್ಯಾರಿಯು ಮದುವೆಯಾದ ಹೊಸದರಲ್ಲಿ ಹೆಂಡತಿ ಕಚ್ಚಾದಳಿಗೆ ಬಾಡಿ, ಲಂಗ ತಂದು ಕೊಟ್ಟಿದ್ದಕ್ಕಾಗಿ ಅವಳು ಕೆಂಡಾಮಂಡಲಳಾಗಿ ಕೂಗಾಡಿದಳು. "ನಿನ್ನ ಹೆಂಡತಿಯನ್ನು ಬೆಳ್ಳಕಾರರ ಲೇಡಿ ಮಾಡುತ್ತಿಯೇನೋ ನನ್ನ ಮಗನೇ? ಈ ಲಂಗ, ಬಾಡೀಸ್, ಹಾಕ್ಲಿಕ್ಕೆ ಶುರುಮಾಡಿ ಜಹನ್ನುಂ ಅನ್ನೋ ನರಕಕ್ಕೆ ದಾಖಲು ಮಾಡ್ತೀಯಾ? ನನ್ನ ಮನೆತನದ ಹುಡಿಗೀರೆಲ್ಲ ಇವಳ ಹಾಗೆ ವೇಷ ಕಟ್ಟೋದಕ್ಕೆ ಸುರು ಮಾಡಿದ್ರೆ ಅವ್ರನ್ನು ಮದ್ವೆ ಆಗೋದಕ್ಕೆ ಯಾರು ಬಂದಾರೋ..."[೧೦] ವಸ್ತ್ರಸಂಹಿತೆಯನ್ನು ಪುರುಷ ಸಮಾಜ ಹೇರಿದ್ದಾದರೂ ಅದನ್ನು ಶ್ರದ್ಧೆಯಿಂದ ಆಚರಿಸಿಕೊಂಡು ಬಂದವರು ಕಚ್ಚಾದಳ ಅತ್ತೆಯಂತಹ ಹೆಣ್ಣುಗಳೇ ಆಗಿದ್ದಾರೆ.

**೪.೨. ಕುಟುಂಬ:**

ಸಾಮಾಜಿಕ ಸಂಸ್ಥೆಗಳನ್ನು ಅವಲೋಕಿಸಿದಾಗ ಅವುಗಳಲೆಲ್ಲಾ ಕುಟುಂಬ ಚಿಕ್ಕ ಹಾಗೂ ಪ್ರಾಥಮಿಕ ಸಂಸ್ಥೆಯು ಇತರ ಎಲ್ಲಾ ಸಂಸ್ಥೆಗಳಿಗೂ ಮೂಲ. ಏಕೆಂದರೆ ಇತರ ಎಲ್ಲಾ ಸಂಸ್ಥೆಗಳು ನಿಂತಿರುವುದು ಕುಟುಂಬದ ಆಧಾರದ ಮೇಲೆ. ಅವು ತಮ್ಮ ಸದಸ್ಯರ ಬಲ ತತ್ವವನ್ನು ಪಡೆಯುವುದು ಕುಟುಂಬದಿಂದ. ಅದು ಎಲ್ಲಾ ಸಮಾಜಗಳಲ್ಲೂ ಸರ್ವೇಸಾಮಾನ್ಯ ದೊಡ್ಡ ಸಂಸ್ಥೆಯಾದ ಸಮಾಜದಲ್ಲಿರುವ ಮತ್ತು ಇರಬಹುದಾದ ಎಲ್ಲಾ ಅಂಶಗಳು ಕುಟುಂಬದಲ್ಲಿವೆ. ದೊಡ್ಡ ಸಮಾಜದಲ್ಲಿ ಆಟ, ವಿದ್ಯೆ, ವೃತ್ತಿ, ಧರ್ಮ ಮತ್ತು ರಾಜಕೀಯ ಸಂಸ್ಥೆಗಳಿವೆ. ಈ

ಎಲ್ಲಾ ಸಂಸ್ಥೆಗಳ ಸೂಕ್ಷ್ಮಾತೀಸೂಕ್ಷ್ಮ ಅಂಶಗಳು ಕುಟುಂಬದ ಜೀವನದಲ್ಲಿ ಹಾಸುಹೊಕ್ಕಾಗಿವೆ. ಮಕ್ಕಳ ಆಟ, ಅವರ ವಿಧ್ಯಾಭ್ಯಾಸ, ಧಾರ್ಮಿಕ ಬೆಳವಣಿಗೆಗೆ ಶಿಸ್ತನ್ನು ಪಾಲಿಸುವ ಅಭ್ಯಾಸಕ್ಕೆ ಕುಟುಂಬವು ಮೂಲಕೇಂದ್ರ. "ಈ ಕುಟುಂಬ ವ್ಯವಸ್ಥೆಯು ಮಾನವನ ಇತಿಹಾಸದಲ್ಲಿ, ಮಾನವ ಸಮಾಜದ ಸಮುನ್ನತಿಯಲ್ಲಿ ಬಲುದೊಡ್ಡ ಸಾಧನೆ. ಅತಿ ಪ್ರಾಚೀನ ಕಾಲದಿಂದಲೂ ಯಶಸ್ವಿಯಾಗಿ ಸಾಗಿ ಬಂದಿರುವ, ಸಾರ್ವತ್ರಿಕ ಸಾರ್ವಕಾಲಿಕ ಸಂಸ್ಥೆ ಕುಟುಂಬ ಕೋಟಿ ಕೋಟಿಯಲ್ಲಿರುವ ಜನಸಮುದಾಯ ಕುಟುಂಬವೆಂಬ ಪುಟ್ಟ ಪುಟ್ಟ ಘಟಕಗಳಲ್ಲಿ ವ್ಯವಸ್ಥಿತವಾಗಿ ಹಂಚಿಹೋಗಿ ಇಡೀ ಸಮಾಜವು ತನ್ನ ವ್ಯವಹಾರವನ್ನು ಸುಸೂತ್ರವಾಗಿ ನಿರ್ವಹಿಸಲು ಇದು ಸಹಕಾರಿಯಾಗಿದೆ."[೧೧]

ಇತರ ಸಂಸ್ಥೆಗಳು ಕುಟುಂಬ ವಹಿಸುವ ಜವಾಬ್ದಾರಿಯನ್ನು ಎಷ್ಟೋ ಕಡಿಮೆಮಾಡಿ, ತಾವು ಆ ಜವಾಬ್ದಾರಿಯನ್ನು ವಹಿಸಿದರೂ ಆ ಹೊಣೆಗಾರಿಕೆ ಪೂರ್ಣವಾಗಿ ಕುಟುಂಬದಿಂದ ಬಿಟ್ಟು ಹೋಗುವುದಿಲ್ಲ. ಸಮಾಜದಲ್ಲಿರುವ ಎಲ್ಲಾ ಸಂಸ್ಥೆಗಳು ಪಂಗಡಗಳು, ವೃತ್ತಿಗಳು, ಎಲ್ಲಾ ರೀತಿಯ ನೀತಿಗಳೂ, ಜೀವನದ ಎಲ್ಲಾ ಅವಸ್ಥೆಗಳೂ, ಎಲ್ಲಾ ಆಶ್ರಮಗಳು ಸಂಬಂಧಗಳೂ ಹುಟ್ಟು ಪಡೆದಿರುವುದು ಕುಟುಂಬದಿಂದ. ತನ್ನವರು, ಪರಕೀಯರು, ಸ್ವಜಾತಿ, ಪರಜಾತಿ, ಸ್ವಬಳಗ, ನೆರೆಹೊರೆ, ರಕ್ತಸಂಬಂಧ, ಬಂಧು-ಬಳಗ, ಸ್ನೇಹಿತರು, ಶತ್ರುಗಳು, ದಾಸ, ಧಣಿ, ಧನಿಕ, ದರಿದ್ರ, ಸೇವಕ, ಸಹೋದ್ಯೋಗಿ ಮುಂತಾದ ಸಾಮಾಜಿಕ ಭೇದಗಳ ಮೂಲನೆಲೆ ಕುಟುಂಬ. ತಂದೆ-ತಾಯಿ, ಮಗ-ಸೊಸೆ, ಮಗಳು-ಅಳಿಯ, ಮಾವ-ಅತ್ತೆ, ಅಜ್ಜ-ಅಜ್ಜಿ ಮುಂತಾದ ಬಂಧುವಾಚಕ ಶಬ್ಧಗಳು ಬಾಂಧವ್ಯಗಳು ಹುಟ್ಟಿ ಚಲಾವಣೆಯಲ್ಲಿರುವುದು ಕುಟುಂಬ ಜೀವನದಲ್ಲಿ.

ಕೈಗಾರಿಕಾ ಪೂರ್ವ ಸಾಮಾಜಿಕ ಬದುಕಿನಲ್ಲಿ ಕುಟುಂಬವು ಜೀವನಕ್ಕೆ ಬೇಕಾದ ಹೆಚ್ಚು ಕಡಿಮೆ ಎಲ್ಲಾ ಪದಾರ್ಥಗಳನ್ನು ತಯಾರಿಸುವ ಕೇಂದ್ರವಾಗಿತ್ತು. ಅದು ತಯಾರಿಸಿದ ಪದಾರ್ಥಗಳನ್ನು ವಸ್ತುಗಳನ್ನು ಹಂಚುವ ಸಂಸ್ಥೆಯೂ ಆಗಿತ್ತು. ಶ್ರಮದಯೆ, ವಿಧೇಯತೆ, ಸಹಕಾರ, ಸೇವೆ, ಸಹನೆ, ಅನುಕಂಪ, ಗೌರವ ಈ ಭಾವನೆಗಳು ಹುಟ್ಟುವುದು ಕುಟುಂಬ ಜೀವನದಲ್ಲಿ. ಅವುಗಳ ಕಲಿಕೆ ಕುಟುಂಬಗಳ ಪರಸ್ಪರ ಸಂಬಂಧಗಳ ಮೂಲಕ ಅನುಸರಣೆಯಾಗುತ್ತಿತ್ತು. ಈ ನೆಲೆಯಲ್ಲಿ ಮತ, ಸಂಸ್ಕೃತಿಗಳು ಆಕಾರಗೊಳ್ಳುತ್ತಾ ತಮ್ಮ ಪ್ರಭಾವವನ್ನು ಕುಟುಂಬದ ಸದಸ್ಯರ ಮೇಲೆ ನಿರಂತರವಾಗಿ ಬೀರುತ್ತವೆ.

ಕುಟುಂಬ ಜೀವನವು ಯಾವ ಕಾಲದಲ್ಲಿ ಹುಟ್ಟಿತು ಎಂಬುದನ್ನು ನಿರ್ಧರಿಸಲಾಗಿಲ್ಲ. ಆದರೆ ಒಂದು ವ್ಯವಸ್ಥಿತ ಸ್ವರೂಪದ ನೆಲೆಯಲ್ಲಿ ವೃತ್ತಿ, ಕೃಷಿ, ಉತ್ಪಾದನೆಗಳ ಮೂಲಕ ಊಟ, ವಸತಿ, ಬಟ್ಟೆ ಬರೆಗಳಿಗೆ ಒಂದು ನೆಲೆ ಕಂಡುಕೊಂಡು ವಿವಾಹದ ಮೂಲಕ ಗಂಡ, ಹೆಂಡತಿ, ಮಕ್ಕಳು

ರಕ್ತಸಂಬಂಧಿಗಳು ಎಂಬ ಖಚಿತವಾದ ಭಾವನಾತ್ಮಕ ಹೊಂದಾಣಿಕೆ ಪ್ರಾಪ್ತವಾದ ಕಾಲದಿಂದಲೇ ಕುಟುಂಬ ಜೀವನ ನಾಂದಿಯಾಗಿದೆ. ವಿವಾಹ ಎನ್ನುವುದು ಒಂದು ಬಹುಮುಖ್ಯ ಅಂಗ. ಹಾಗೂ ಸಂಸ್ಥೆಯಾಗಿ ಸಾಮಾಜಿಕ, ಧಾರ್ಮಿಕ ಮಾನ್ಯತೆಯನ್ನು ಪಡೆದಿದೆ. ಆ ಮೂಲಕ ಅಸ್ತಿತ್ವ ಪಡೆಯುವಂತೆ ಜೀವನ ವ್ಯವಸ್ಥೆ ಕುಟುಂಬವಾಗಿ ರೂಪಿತವಾಗಿದೆ. ಎಷ್ಟೋ ಹಿಂದಿನ ಕಾಲದ ಚರಿತ್ರೆಯನ್ನು ನಾವು ಪರಿಶೀಲಿಸಿದರೂ ಅಲ್ಲಾಗಲೇ ಕುಟುಂಬ ಜೀವನವು ನೆಲೆಯಾಗಿರುವುದು ಸ್ಪಷ್ಟವಾಗುತ್ತದೆ. ನಮಗೆ ತಿಳಿದಿರುವ ಅತ್ಯಂತ ಪ್ರಾಚೀನವಾದ ಬ್ಯಾಬಿಲೋನಿಯಾ ಈಜಿಪ್ಟ್, ಭಾರತೀಯರು ಮತ್ತು ಚೀನಿಯ ಸಮಾಜಗಳಲ್ಲಿ ಅದು ಆಗಲೇ ತುಂಬಾ ಬೆಳೆದ ಸ್ಥಿತಿಯಲ್ಲಿತ್ತು. ನಾಗರೀಕ ಜೀವನದ ಆವರಣದಲ್ಲಿ ಬಾರದೆ ಉಳಿದಿರುವ ಕಾಡು ಜನರಲ್ಲೂ, ಅನಾಗರಿಕ ಜನರಲ್ಲೂ ಆದಾಗಲೇ ನಿರ್ಧಿಷ್ಟವಾದ ರೂಪ ಪಡೆದಿತ್ತು. ಆದಿ ಮಾನವನು ಕೂಡ ಸಂಘಜೀವಿ ಎಂದು ಹೇಳಲು ಆಧಾರಗಳಿವೆ. ಏಕೆಂದರೆ ಅವನನ್ನು ಹೋಲುವ ಮಾನವ ವಾನರಲ್ಲೂ ಕೂಡ ಕುಟುಂಬದ ಲಕ್ಷಣಗಳಿವೆ. ಈ ಎಲ್ಲಾ ಕಾರಣಗಳಿಂದಾಗಿ ಕುಟುಂಬದ ಉಗಮವನ್ನು ನಿರ್ದಿಷ್ಟ ಪಡಿಸುವುದು ಖಚಿತವಾಗಿ ಹೀಗೆಯೇ ಎಂದು ಗುರುತಿಸುವುದು ಕಷ್ಟವಾಗುತ್ತದೆ.

ಜಗತ್ತಿನ ಮಾತೃಮೂಲೀಯ ಕುಟುಂಬ, ಪಿತೃಮೂಲೀಯ ಕುಟುಂಬ ಎಂಬ ಪ್ರಧಾನ ವಿಂಗಣೆಯಿದೆ. ಪಿತೃಮೂಲೀಯಾ ಕುಟುಂಬದಲ್ಲಿ ಕೂಡುಕುಟುಂಬ, ವಿಭಕ್ತ ಕುಟುಂಬಗಳೂ ಇದ್ದು, ಪ್ರಸ್ತುತ ಬಹುತೇಕ ಸಮಾಜವು ಪಿತೃಪ್ರಧಾನ ಕುಟುಂಬಗಳಿಂದ ಕೂಡಿದುದಾಗಿದೆ. ಪಿತೃಪ್ರಾಧಾನ್ಯತೆಯ ಕುಟುಂಬದಲ್ಲಿನ ಸ್ತ್ರೀ-ಪುರುಷ ಸಂಬಂಧವನ್ನು ಅಸಮಾನ ನೆಲೆಯಲ್ಲಿರಿಸುತ್ತದೆ. ಕುಟುಂಬದ ಗಂಡು ಸದಸ್ಯರಾದ ಮಾವ, ತಂದೆ, ಭಾವ, ಮಗ, ಅಣ್ಣ, ತಮ್ಮ, ಅಜ್ಜ ಮುಂತಾದವರಿಗೆ ವಿಶೇಷ ಬಗೆಯ ಸೌಲಭ್ಯಗಳು, ಹಕ್ಕುಗಳು ರಿಯಾಯಿತಿಗಳನ್ನು ನೀಡುತ್ತಾ ಮಹಿಳಾ ಸದಸ್ಯರನ್ನು ಅವರ ನಿಯಂತ್ರಣಕ್ಕೆ ಒಗ್ಗಿಸಿ ವಿಧೇಯ ಪ್ರಜೆಯಾಗಿಸುವ ಕಾರ್ಯಚರಣೆ ಅನೇಕ ಸ್ವರೂಪದಲ್ಲಿ ನಡೆಯುತ್ತದೆ. ಕುಟುಂಬ ಕೇಂದ್ರದಲ್ಲಿ ಹೆಣ್ಣಿಗೆ ವಿಧಿಸಲಾಗುವ ವಿಧೇಯತಾ ಸಂಹಿತೆಯ ಉಲ್ಲಂಘನೆಯು ವಂಚನೆ ಹಾಗೂ ಶಿಕ್ಷೆಗೆ ಕಾರಣ ಕುಟುಂಬ ನೆಲೆಯ ಈ ಪರಾಧೀನ ಸ್ಥಿತಿಯು ಸಮಾಜದ ಇನ್ನುಳಿದ ನೆಲೆಗಳಲ್ಲಿಯೂ ಪುನರಾವರ್ತಿತವಾಗುತ್ತದೆ. ಅಷ್ಟೇ ಅಲ್ಲ ಉಳಿದ ಎಲ್ಲಾ ನೆಲೆಗಳಲ್ಲಿ ಕುಟುಂಬದೊಳಗಿನ ಹೆಣ್ಣಿನ ಪರಾವಲಂಬಿತ ಸ್ಥಿತಿಯ ಸಮರ್ಥನೆ ಮುಂದುವರೆಯುವಿಕೆಗೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಾಯ ಮಾಡುತ್ತವೆ.

ಕುಟುಂಬದ ಒಳಗೆ ಮಹಿಳೆಯು ನಾನಾ ರೀತಿಯಲ್ಲಿ ಹಿಂಸೆಗೆ ಒಳಗಾಗುತ್ತಾಳೆ. ವಾಸ್ತವವಾಗಿ ಮಹಿಳೆಯರ ಮೇಲೆ ಅತಿ ಹೆಚ್ಚಿನ ದೌರ್ಜನ್ಯಗಳು ನಡೆಯುವುದು ಈ ಕುಟುಂಬದಲ್ಲೇ. ನಾಲ್ಕು

ಗೋಡೆಯೊಳಗೆ ನಡೆಯುವ ದೌರ್ಜನ್ಯ, ಹಿಂಸೆ, ಮನೆಯ ಮರ್ಯಾದೆಯ ಹೆಸರಿನಲ್ಲಿ ಹೊರಗೆ ಪ್ರಕಟಾಗುವುದಿಲ್ಲ. ಒಂದು ವೇಳೆ ಪ್ರಕಟವಾದರೂ ಅದೊಂದು ಖಾಸಗಿ ವಿಷಯವೆಂದು ಪರಿಗಣಿಸಲಾಗುತ್ತದೆಯೇ ಹೊರತು, ಸಮಸ್ಯೆ ಎಂದು ಪುರುಷ ಪ್ರಧಾನ ಸಮಾಜ ಗುರುತಿಸುವುದಿಲ್ಲ. ಆದರೆ ೧೯೯೩ರಲ್ಲಿ ವಿಶ್ವಸಂಸ್ಥೆಯು ತನ್ನ ಸಾಮಾನ್ಯ ಅಧಿವೇಶನದಲ್ಲಿ ಪ್ರಕಟಣೆಯೊಂದನ್ನು ಅಂಗೀಕರಿಸಿತು. ಅಂದರೆ ಸಾರ್ವಜನಿಕ ಅಥವಾ ಖಾಸಗಿ ಬದುಕಿನಲ್ಲಿ ಮಹಿಳೆಯರಿಗೆ ನೀಡಲಾಗುವ ಯಾವುದೇ ರೀತಿಯ ದೈಹಿಕ ಹಾಗೂ ಲೈಂಗಿಕ ಮತ್ತು ಮಾನಸಿಕ ಕಿರುಕುಳವನ್ನು ಹಿಂಸೆಯೆಂದು ಅದು ಪರಿಗಣಿಸಿತ್ತು. ಹಲವು ಮಹಿಳಾ ಸಂಘಟನೆಗಳ ಹೋರಾಟದ ಫಲವಾಗಿ ಇಂದು ಕೌಟುಂಬಿಕ ದೌರ್ಜನ್ಯ ತಡೆಕಾಯ್ದೆ ಜಾರಿಯಲ್ಲಿ ಬಂದಿದೆ. ಇದರಿಂದ ಕುಟುಂಬದ ಒಳಗೆ ನಡೆಯುವ ಹಿಂಸೆ, ದೌರ್ಜನ್ಯಗಳು ಪಿತೃಪ್ರಧಾನ ನೆಲೆಯ ಸಮರ್ಥನೆಯನ್ನು ಪಡೆಯುವ ಬದಲಾಗಿ ಮಹಿಳಾಪರ ಕಾನೂನಿನ ಚೌಕಟ್ಟಿನಲ್ಲಿಯೇ ದಂಡನಾರ್ಹವಾಗಿದೆ. ಕುಟುಂಬದ ದೌರ್ಜನ್ಯದ ಸ್ವರೂಪ ಅತ್ಯಂತ ಸಂಕೀರ್ಣ ರೂಪು ತಳೆದಿದೆ. ಆಧುನೀಕರಣ ಪ್ರಕ್ರಿಯೆಗೆ ಅಷ್ಟಾಗಿ ಒಳಗಾಗದ ಊಳಿಗಮಾನ್ಯ ಗ್ರಾಮನೆಲೆಯಲ್ಲಿ ಮಹಿಳಾ ದೌರ್ಜನ್ಯ ತಡೆಕಾಯ್ದೆ ಪರಿಣಾಮಕಾರಿಯಾಗಿ ಜಾರಿಯಾಗುವಲ್ಲಿ ಅನೇಕ ಅಡೆತಡೆಗಳಿವೆ.

ಫಕೀರ್ ಮುಹಮ್ಮದ್ ಕಟ್ಪಾಡಿ ಅವರ 'ಸರಕುಗಳು' ಕಾದಂಬರಿಯಲ್ಲಿ ಹಾಜೀಮಾಳ ಮಗಳಾದ ಜುಲೇಖಾ, ಹಪ್ಸಾ ಇಬ್ಬರೂ ಅರಬರೊಂದಿಗೆ ಮದುವೆಯಾಗಿದ್ದವರು. ಜ್ವರದಿಂದ ನರಳುತ್ತಿದ್ದ ಮಗುವನ್ನು ಬಿಟ್ಟು ಜುಲೇಖ ಅರಬ ಗಂಡನೊಂದಿಗೆ ಲಾಡ್ಜಿನಲ್ಲಿ ರಾತ್ರಿ ಕಳೆದು ಬಂದಿದ್ದಳು. ಮಗುವಿಗೆ ಜ್ವರಹೆಚ್ಚಾಗಿ ಅಮ್ಮ ಹಾಜೀಮಾ ಜುಲೇಖಾ ಆಸ್ಪತ್ರೆಗೆ ಹೋದರು. ಹಪ್ಸಾ ಒಳಗೆ ಬಂದವಳೆ "ಜುಲೇಖಾ ಹಾಗಾದ್ರೆ ಆಗ್ಲೇ ಬಂದಿದ್ಲಾ..? ನಂಗೆ ಈವತ್ತು ಲೇಟು, ಆ ಮುದುಕ ಅರಬ ಬೆಳಿಗ್ಗೆನೇ ರಗಳೆ ಮಾಡ್ಲಿಕ್ಕೆ ಸುರು ಮಾಡಿದ್ದ. ಅವನ ಹಣದ ಗಂಟು ಬಿಚ್ಚಸಬೇಕಾದ್ರೆ ಸಾಕೋ-ಬೇಕಾಗುತ್ತದೆ. ಈವತ್ತು ಖರ್ಚಿಗೇನೂ ಇಲ್ಲ ಅಂತ ಹೇಳಿ ಒಂದು ಹತ್ತು ರೂಪಾಯಿ ಬಿಚ್ಚಿಸಬೇಕಾದ್ರೆ ಸಾಕೋಬೇಕಾಯ್ತು ಮರಾಯ... ಈ ಅರಬಿ ಭಾಷೆಯೊಂದು ನಮಗೆ ಬಂದ್ರೆ ಈ ಮಕ್ಕಳನ್ನು ಚೆನ್ನಾಗಿ ಬೋಳಿಸಬಹುದಿತ್ತು. ಆ ಭಾಷೆ ಸ್ವಲ್ಪವೂ ಅರ್ಥವಾಗೊದಿಲ್ಲ. ನಮ್ಮ ಭಾಷೆ ಅವರಿಗೆ ಅರ್ಥ ಆಗೋದಿಲ್ಲ"[೨] ಎನ್ನುತ್ತಾಳೆ. ಅಣ್ಣ ಮಮ್ಮುಟಿಗೆ ಈ ಮಾತು ಹೇಳುವಲ್ಲಿ ಬಡಮುಸ್ಲಿಂ ಹೆಂಗಸು ಮುದುಕರಾದ ಅರಬರನ್ನು ಮದುವೆಯಾಗಿ ಪಡುವ ಬವಣೆಯ ವಾಸ್ತವ ಚಿತ್ರಣವಿದೆ. ಕುಟ್ಟಿಚ್ಚಿರಾದ 'ವಿಶಿಷ್ಟ' ಕುಟುಂಬ ಪದ್ಧತಿಯು ಪಿತೃಪ್ರಧಾನ ಅಧಿಕಾರವುಳ್ಳ-ಮಾತೃಪ್ರಧಾನ ಸಂಸ್ಕೃತಿಯ ಬದುಕುಳ್ಳದ್ದು. ಇಲ್ಲಿ 'ಕೊಟ್ಟ ಗಂಡ ಕುಲಕ್ಕೆ ಹೊರಗೆ'

ಆದರೆ ಕುಟುಂಬದಲ್ಲಿನ ದುಡಿಮೆ–ನಿರ್ವಹಣೆ ಎಲ್ಲದರ ಜವಾಬ್ದಾರಿ ಆತನದು. ಅವನ ಮದುವೆಯಾದ ಮೇಲೆ ಆ ಕುಟ್ಟಿಚ್ಚಿರಾದ ಕುಟುಂಬದ ಹೊಣೆಗಾರಿಕೆಯಲ್ಲಾ ಅರಬರನ್ನು ಮದುವೆಯಾದ ಹೆಣ್ಣು ಮಕ್ಕಳದು. ಮಕ್ಕಳ ಜವಾಬ್ದಾರಿಯನ್ನು ವಹಿಸಿಕೊಳ್ಳದ ನಿಕಾಹ್‌ಗಳಿಂದ ಅಂಥ ಹೆಣ್ಣುಮಕ್ಕಳ ಬದುಕೇನೂ ಸುಧಾರಣೆಯಾಗುವುದಿಲ್ಲ.

ಇಂತಹದೇ ಕಥೆಯನ್ನು ಹೋಲುವ ಬೋಳುವಾರು ಮಹಮ್ಮದ್ ಕುಂಞ ಅವರ ಮುತ್ತುಚ್ಚೇರ ಕಥೆಯು ಅರಬ್ಬರಿಗೆ ಮದುವೆ ಮಾಡಿಕೊಳ್ಳುವ ಕುರಿತು ದಲ್ಲಾಳಿ ಹೀಗೆ ಹೇಳುತ್ತಾನೆ. "ನಮ್ಮ ಉನ್ನಿಸಾ, ಬಂಗಾರದ ತುಂಡಿನಂಥ ಹುಡುಗಿ ಕಳಗೆ ಇಟ್ಟರೆ ಇರುವೆ ಕಚ್ಚೀತು, ಮೇಲೆ ಇಟ್ಟರೆ ಕಾಗೆ ಕೊಂಡು ಹೋದಿತು. ಅಂತ ಬೆಳೆದ ಮಗು ಕಣ್ಣೀರು ಎಂದರೇನು ಅಂತ ಅವಳು ಕಲೀಲಿಲ್ಲ. ಅದೇ ಆರು ತಿಂಗಳ ವಾಯಿದೆ ಹೇಳಿದ್ದೇನೆ. ಅಷ್ಟರೊಳಗೆ ವೀಸಾ ಮಾಡಿ ಕರಕೊಂಡು ಹೋಗುವುದಾದರೆ ಮಾತ್ರ ಈ ಸಂಬಂಧ ಆದೀತು ಎಂದು ಖಡಕ್ಕಾಗಿಯೆ ಹೇಳಿದ್ದೇನೆ ನಿನಗೆ ಗೊತ್ತಿದೆ. ನನ್ನ ಮಾತೆಂದರೆ ಒಂದು ಪೆಟ್ಟು ಎರಡು ತುಂಡು. ನಿನ್ನ ಮಗಳು ಒಮ್ಮೆ ಕಡಲು ದಾಟಿದಳು ಅಂದರೆ ಸಾಕು, ನಿನ್ನ ಮನೆಗೆ ಬಂಗಾರದ ತಗಡು ಹೊದಿಸಬಹುದು"[೧೩] ಎಂದು ಅವಳ ಮನಸ್ಸನ್ನು ಪುಸಲಾಯಿಸಲು ಪ್ರಯತ್ನಿಸಿ ಒಪ್ಪಿಗೆಯನ್ನು ಪಡೆಯುತ್ತಾನೆ. ತನ್ನ ಕುಟುಂಬದಲ್ಲಿ ಬಡತನದ ಕಾರಣಕ್ಕಾಗಿ ಅವಳು ನೊಂದುಕೊಳ್ಳುವುದು ಮತ್ತು ಶೋಷಣೆಗೆ ಒಳಗಾಗುವುದನ್ನು ಇಲ್ಲಿ ಕಾಣಬಹುದು. 

ಅದೇ ರೀತಿ ಶ್ರೀಮಂತ ಕುಟುಂಬಗಳಾದ ಸೈದುಕೋಯಾ, ಹಾಜಿಯವರ ಮನೆಯಲ್ಲಿಯೂ ಕುಟುಂಬದಲ್ಲಯೂ ಸಹ ಸ್ತ್ರೀಯರ ಶೋಷಣೆ ನಡೆಯುವುದನ್ನು ನೋಡಬಹುದು. ಹೆಣ್ಣು ಶ್ರೀಮಂತರ ಮನೆಯವಳೇ ಆಗಲಿ, ಬಡವರ ಮನೆಯವರೆ ಆಗಲಿ ಶೋಷಣೆ ಮಾತ್ರ ತಪ್ಪಿದಲ್ಲ. ಸೈದುಕೋಯಾರ ಮಗಳಿಗೆ ಮದುವೆ ಮಾಡಿ ಅವಳು ಹೇರುವುದು ಕೆಲಸ ಲಾಲನೆ ಪಾಲನೆ ಮಾಡುತ್ತಾ ಇರಬೇಕು ಅದೇ ತನ್ನ ಗಂಡು ಮಗನಾದ ಸಲೀಂನಿಗೆ ಎಂ.ಎ.ವರೆಗೆ ವಿದ್ಯಾಭ್ಯಾಸ ಮಾಡಿಸುತ್ತಾರೆ. ಆದರೆ ಜುಬೇದಾಳಿಗೆ ಮದುವೆ ಮಾಡಿ ಮಕ್ಕಳನ್ನು ಮಾಡುವುದೇ ಕೆಲಸವೆಂಬಂತೆ ಶೋಷಣೆ ಮಾಡಲಾಗುತ್ತದೆ.

ಕಟ್ಪಾಡಿಯವರ ಕಾದಂಬರಿಯಲ್ಲಿ ಹಾಜಿಯವರು ತಮ್ಮ ಮಗಳು ಯಾವ ತಪ್ಪು ಮಾಡದಿದ್ದರೂ ತನ್ನ ವೈಯಕ್ತಿಕ ಪ್ರತಿಷ್ಠೆಗಾಗಿ ಆಯುಷಾಳನ್ನು ಸಲೀಂನಿಂದ ಬೇರೆ ಮಾಡುತ್ತಾನೆ. ಇದೇ ಸಂದರ್ಭಕ್ಕೆ ಸಾರಾರವರ ಚಪ್ಪಲಿಗಳ ಕತೆಯನ್ನು ನಿದರ್ಶನವಾಗಿ ಕೊಡುವುದಾದರೆ ಹಸನ್ ಬ್ಯಾರಿಯು "ಹೆಂಗಸರನ್ನು ಕಾಲಿನ ಚಪ್ಪಲಿಯಂತೆ ಬಳಸಿಕೊಳ್ಳಬೇಕು. ಬೇಕಾದಾಗ ಉಪಯೋಗಿಸಿ,

ಬೇಡವಾದಾಗ ಮೂಲೆಯಲ್ಲಿ ಬಿಟ್ಟು ಬಿಡಬೇಕು"[೧೪] ಹೀಗೆ ಪುರುಷ ಸಮಾಜ ವ್ಯವಸ್ಥೆಯಲ್ಲಿ ಆಶ್ರಯದಾತ ಸ್ತ್ರೀಯರ ರಕ್ಷಕ ಎಂಬಂತೆ ಮೌಲ್ಯಗಳು ನಿರೂಪಿತವಾಗುತ್ತವೆ. ಕೌಟುಂಬಿಕ ಚೌಕಟ್ಟಿನೊಳಗೆ ಉಸಿರುಗಟ್ಟಿಸುವ ಸ್ತ್ರೀ ಶೋಷಣೆಯ ನೆಲೆಗಳಿವೆ.

ಫಕೀರ ಮುಹಮ್ಮದ್ ಕಟ್ಪಾಡಿಯವರ 'ಕಚ್ಚಾದ' ಕಾದಂಬರಿಯಲ್ಲಿ ಸೂಫೀ ಬ್ಯಾರಿಯು ಮದುವೆಯಾದ ಹೊಸದರಲ್ಲಿ ಹೆಂಡಿತಿಗೆ ಕಚ್ಚಾದಳಿಗೆ ಬಾಡಿ, ಲಂಗ ತಂದು ಕೊಟ್ಟಿದ್ದಕ್ಕಾಗಿ ಅವಳ ಅತ್ತೆ ಕೆಂಡಾಮಂಡಲಳಾಗಿ ಕೂಗಾಡಿದಳು. "ನಿನ್ನ ಹೆಂಡ್ತಿಯನ್ನು ಬೆಳ್ಳಕಾರರ ಲೇಡಿ ಮಾಡುತ್ತಿಯೇನೋ ನನ್ನ ಮಗನೆ...? ಈ ಲಂಗ, ಬಾಡೀಸ್, ಹಾಕ್ಲಿಕ್ಕೆ ಶುರು ಮಾಡಿ ಜಹನ್ನುಂ ಅನ್ನೋ ನರಕಕ್ಕೆ ದಾಖಲು ಮಾಡ್ತಿಯಾ? ನನ್ನ ಮನೆತನದ ಹುಡಿಗಿರೆಲ್ಲ ಇವ್ಳ ಹಾಗೆ ವೇಷ ಕಟ್ಟೋದಕ್ಕೆ ಸುರು ಮಾಡಿದ್ರೆ ಅವ್ರನ್ನು ಮದ್ವೆ ಆಗೋದಕ್ಕೆ ಯಾರು ಬಂದಾರೋ...."[೧೫]

ಮುಸ್ಲಿಂ ಹೆಣ್ಣು ಸೀರೆಯ ಒಳಗೆ ಲಂಬ, ಬ್ಲೌಸಿನೊಳಗೆ ಬಾಡಿ ತೊಡುವುದುಕ್ಕೂ ಕುಟುಂಬದ ನಾಲ್ಕು ಗೋಡೆಗಳೊಳಗಡೆಯೇ ದೀರ್ಘ ಹೋರಾಟ ಮಾಡಿದ್ದಾಳೆ. ಅವಳು ಅದಕ್ಕಾಗಿ ಬೀದಿಗಿಳಿದು ಹೋರಾಟ ಮಾಡದಿರಬಹುದು. ಆದರೆ ಅವಳ ಈ ಮೌನ ಹೋರಾಟದ ಧ್ವನಿಯ ದಾಖಲಾತಿ. ಇಲ್ಲಿಯವರೆಗಿನ ಶಿಷ್ಟ ಸಾಹಿತ್ಯದಲ್ಲಿ ಕಂಡುಬಂದಿಲ್ಲ. ಲಂಗ, ಬಾಡಿ ತೊಟ್ಟರೂ ಸಹ ಅತ್ತೆಯ ಸಿಟ್ಟು, ತಿವಿತ ಸಹಿಸಬೇಕಾಗಿತ್ತು. ಉಡುಪಿನ ವಿಷಯ ಒಂದು ಕಡೆಯಾದರೆ "ಗಂಡನೊಂದಿಗೆ ಮಲಗುವುದಕ್ಕೂ ಅತ್ತೆಯ ಪರವಾನಗಿ ಬೇಕಾಗಿತ್ತು" ಒಳ್ಳೆಯ ದಿನಗಳಂದು ಗಂಡನನ್ನು ಸೇರಿದರೆ ಒಳ್ಳೆಯ ಮಕ್ಕಳು ಹುಟ್ಟುವೆ"[೧೬] ಎಂದು ಬೇರೆ ಬೇರೆ ದಿನಗಳಂದು ಕಚ್ಚಾದಳ ಅತ್ತೆ ಅವಳನ್ನು ಬೇರೆ ಕೋಣೆಯಲ್ಲಿ ಮಲಗಿಸುತ್ತಿದ್ದಳು. ಅತ್ತೆಗೆ ಹೆದರಿ ಕಚ್ಚಾದಳು ಕದ್ದು ಕದ್ದು ಬಾಡಿ, ಲಂಗ ತೊಟ್ಟು, ಅತ್ತೆಗೆ ಕಾಣದಂತೆ ಮೈತುಂಬ ಸೆರಗು ಪಾದ ಮುಚ್ಚುವಂತೆ ಸೀರೆ ತೊಟ್ಟು, ಲಂಗ ಕಾಣದಂತೆ ಮಾಡುತ್ತಿದ್ದಳು. ಅತ್ತೆಗೆ ಕಾಣದಂತೆ ಅವುಗಳನ್ನು ಒಗೆದು ಬೇರೆ ಬಟ್ಟೆಗಳಡಿಯಲ್ಲಿ ಮರೆಮಾಡಿ ಒಣಗಿಸುತ್ತಿದ್ದಳು.

ವಸ್ತ್ರ ಸಂಹಿತೆಯನ್ನು ಪುರುಷ ಸಮಾಜದ ಹೇರಿದ್ದಾದರೂ ಅದನ್ನೂ ಶ್ರದ್ಧೆಯಿಂದ ಆಚರಿಸಿಕೊಂಡು ಬಂದವರು ಕಚ್ಚಾದಳ ಅತ್ತೆಯಂತಹ ಹೆಣ್ಣುಗಳೇ ಆಗಿದ್ದಾರೆ. ಪುರುಷ ನಿರ್ಮಿಸಿದ ಸಂಹಿತೆಯನ್ನು ಮರುಮಾತಿಲ್ಲದೆ ಒಪ್ಪಿಕೊಂಡ ಮಹಿಳಾ ಜಗತ್ತು ಒಂದು ಕಡೆಯಿದ್ದರೆ, ಅವರಗಿಂತಲೂ ಒಂದು ಹೆಜ್ಜೆ ಮುಂದೆ ಹೋಗಿ ಅದನ್ನು ಜಾರಿಗೊಳಿಸುವ ಕಚ್ಚಾದಳ ಅತ್ತೆಯಂತಹ ಮಹಿಳೆಯರೂ ಇದ್ದಾರೆ. ಪುರುಷ ನಿರ್ಮಿತ ನಿಯಮಗಳನ್ನು ಪುರುಷರೇ ಮುರಿಯುತ್ತಾರೆಂಬುದಕ್ಕೆ, ಹಸನ್ ಬ್ಯಾರಿ ಹೆಂಡತಿಗೆ ತಂದು ಕೊಡುವ ಬಾಡಿ, ಲಂಗಗಳೇ ಸಾಕ್ಷಿ, ಕಾನೂನು ಮಾಡುವವರೂ

ಅವರೇ. ಮುರಿಯುವವರೂ ಅವರೇ. ಆದರೆ ಶ್ರದ್ಧೆಯಿಂದ ಪಾಲಿಸುವವರು ಮಾತ್ರ ಹೆಣ್ಣು ಮಕ್ಕಳೇ ಆಗಿರುವುದೊಂದು ವಿಪರ್ಯಾಸವೇ ಸರಿ. ಹೀಗೆ ಕುಟುಂಬದಲ್ಲಿ ಮಹಿಳೆಯರು ತಮ್ಮ ಸ್ಥಾನದ ಹಕ್ಕಿನ ಅರಿವು ಇಲ್ಲದೇ, ಶೋಷಿತರಾಗುತಿರುವ ಈ ಮಹಿಳೆಯರು ಈ ಸಮಾಜದ ಮುಗ್ಧ ಮಹಿಳೆಯರಾಗಿದ್ದಾರೆ.

ಅದೇ ರೀತಿ ಸಾರಾ ಅವರ ಚಪ್ಪಲಿಗಳು ಕತೆಯ ಒಂದು ನಿದರ್ಶನ “ನಮ್ಮ ಮನೆತನದ ಹೆಂಗಸರು ಈವರೆಗೆ ಸಿನಿಮಾ ನೋಡಿದ್ದಾರೆಯೇ  ಇವರಿಗೆಲ್ಲಾ ಸಿನಿಮಾ ತೋರಿಸಿ ಕುಟುಂಬದ ಮರ್ಯಾದೆ ತೆಗೆದೆಯಲ್ಲ? ನೀವೆಲ್ಲರೂ ನರಕದ ಕೊಳ್ಳಿಗಳೇ ಆಗಿ ಹೋದಿರಿ”[೧೭] ಎನ್ನುವ ಹಸನ್ ಬ್ಯಾರಿ ತನ್ನ ಮಗಳಿಗೆ ಸಿನಿಮಾ ನೋಡುವುದಕ್ಕೂ ನಿರ್ಬಂಧ ವಿಧಿಸಿದನು.

‘ಕಚ್ಚಾದ’ಳು ಹೀಗೆ ಕುಟುಂಬದಲ್ಲಿ ತನ್ನ ಅತ್ತೆಯ ಶೋಷಣೆ ಮಾತ್ರವಲ್ಲದೆ ಮಗನಿಂದಲೂ, ಅವನ ತಂದೆಯಿಂದಲೂ ಅಪಾರವಾದ ಶೋಷಣೆಯನ್ನು ಅನುಭವಿಸುತ್ತಾಳೆ. ಹೀಗೆ ಇಸ್ಲಾಂ ಧರ್ಮದ ಕೌಟುಂಬಿಕ ನೆಲೆಗಳೂ ಸಹ ಪಿತೃಪ್ರಧಾನ ನೆಲೆಯಲ್ಲಿವೆ. ಸಮಾಜದಲ್ಲಿ ಇದು ಒಪ್ಪಿತ ಮೌಲ್ಯವಾಗಿದೆ. ಇಂತಹ ಕುಟುಂಬ ವ್ಯವಸ್ಥೆಯಲ್ಲಿ ಪಿತೃಪ್ರಧಾನ್ಯತೆಯ ಮೂಲದಲ್ಲಿ ಸ್ತ್ರೀಯರ ಅಧೀನತೆ ಅಡಗಿರುತ್ತದೆ. ಸ್ತ್ರೀಯ ಪರಿಗಣನೆ, ಅಸ್ತಿತ್ವ, ತಲಾಕ್, ಕೌಟುಂಬಿಕ ನಿರ್ವಹಣೆ ಹೀಗೆ ಕಟ್ಪಾಡಿಯವರ ಬರಹಗಳಲ್ಲಿ ವ್ಯಕ್ತವಾಗಿದೆ. ಕೌಟುಂಬಿಕ ಚೌಕಟ್ಟಿನಲ್ಲಿ ವೈವಾಹಿಕ ನೆಲೆಯಲ್ಲಿ ಸ್ತ್ರೀಯರನ್ನು ದಮನಿಸುವ ಚಿತ್ರಣವನ್ನು ಇಲ್ಲಿ ಚರ್ಚಿಸಲಾಗಿದೆ. ಕೌಟುಂಬಿಕ ನೆಲೆಯಲ್ಲಿ ಅಸಮಾನತೆಗಳಿವೆ. ಅವು ಧಾರ್ಮಿಕ, ವೈವಾಹಿಕ, ಒಡೆತನ, ತಲಾಕ್ ಹೆಣ್ಣಿನ ಮೇಲೆ ನಿಯಂತ್ರಣ, ಪಿತೃ ಪ್ರಧಾನ ಮೌಲ್ಯಗಳ ಹೇರಿಕೆ ಅವ್ಯಾಹತವಾಗಿ ನಡೆದುಕೊಂಡು ಬಂದಿವೆ. ಸ್ತ್ರೀಯರ ಬಗ್ಗೆ ಅಪಾರ ಅನುಕಂಪ ತೋರಿದ ಮಹಮ್ಮದ್ ಪೈಗಂಬರರು, ಅವರ ಕಾಲದಲ್ಲಿ ಸ್ತ್ರೀಯರ ಬಗ್ಗೆ ಇರುವ ಕೆಲವು ಅನಿಷ್ಟ ಪದ್ಧತಿಗಳನ್ನು ತಡೆದರು. ಹೆಂಡತಿಯಾದ ಸೀತಾ ಮಾತೆಯ ಶೀಲವನ್ನು ಶಂಕಿಸಿದ ಮರ್ಯಾದಾ ಪುರುಷೋತ್ತಮನಾದ ಶ್ರೀರಾಮ ಅವಳನ್ನು ಕಾಡಿಗಟ್ಟಿದರೆ, ಪ್ರವಾದಿಗಳ ೨ನೇ ಪತ್ನಿ ಆಯೇಷಾರನ್ನು ಶೀಲದ ಶಂಕೆಯ ಕಾರಣಕ್ಕಾಗಿ ಕೆಲವು ದಿನ ತವರಿಗೆ ಕಳಿಸುತ್ತಾರೆ.

ಪುರುಷ ಪ್ರಧಾನ್ಯದ ಚೌಕಟ್ಟಿನಲ್ಲಿರುವ ಮುಸ್ಲಿಂ ಮಹಿಳೆ ನಿರ್ಬಂಧಗಳಲ್ಲಿ ಬದುಕಿದ್ದಾಳೆ. ಕೌಟುಂಬಿಕ ವಲಯಗಳಲ್ಲಿಯ ನಿರ್ಬಂಧಗಳ ಪ್ರಕಾರ ಅವಳು ಜೋರಾಗಿ ನಡೆಯುವಂತಿಲ್ಲ. ಜೋರಾಗಿ ನಗುವಂತಿಲ್ಲ. ಜೋರಾಗಿ ಅಳುವಂತಿಲ್ಲ. ಪುರುಷರೊಂದಿಗೆ ಮಾತನಾಡುವಂತಿಲ್ಲ. ಬುರ್ಖಾಧರಿಸದೆ ಹೊರಗೆ ಬರುವಂತಿಲ್ಲ. ಹೀಗೆ ಅಸಂಖ್ಯ ನಿಷೇಧಗಳ ಮಧ್ಯೆ ಮುಸ್ಲಿಂ ಮಹಿಳೆ

ಬದುಕಿದ್ದಾಳೆ. ಕುಟುಂಬದಲ್ಲಿ ಗಂಡೂ ಯಾವತ್ತೂ ಹೆಣ್ಣನ್ನು ನಿಷೇದ ನಿರ್ಬಂಧಗಳಲ್ಲಿ ಅವಳನ್ನಿಟ್ಟಿದ್ದಾನೆ

ಆದರೆ ಆಧುನಿಕತೆಯ ಪ್ರಭಾವದಿಂದಾಗಿ ಇಂದು ಮಹಿಳೆ ಕುಟುಂಬದ ಜವಾಬ್ದಾರಿ ಹೊತ್ತ ಮಹಿಳೆ ಹೊರಗೆ ಹೋಗಿ ದುಡಿದು ಮನೆ ಸಂಸಾರ ಸಾಗಿಸುತ್ತಿದ್ದಾಳೆ. ಸಮಾಜದಲ್ಲಿ ತನ್ನ ಸ್ಥಾನಮಾನ ಸಾಮರ್ಥ್ಯಗಳನ್ನು ಹೆಚ್ಚಿಸಿಕೊಳ್ಳುತ್ತಿದ್ದಾಳೆ. ಅವಳ ಜವಾಬ್ದಾರಿಗಳು ಮನೆಯ ಒಳಗೆ ಹೊರಗೆ ಹೆಚ್ಚಾಗುತ್ತಿವೆ.

**೪.೩. ಶಿಕ್ಷಣ:**

ವೈಚಾರಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ಪುರುಷರು ಮತ್ತು ಮಹಿಳೆಯರ ವ್ಯಕ್ತಿತ್ವದ ವಿಕಾಸಕ್ಕೆ ಲೌಕಿಕ ಮತ್ತು ಅಲೌಕಿಕ ಶಿಕ್ಷಣ ತೀರ ಅವಶ್ಯವೆಂದು ಇಸ್ಲಾಮ್ ಧರ್ಮ ಹೇಳುತ್ತದೆ. ಅದರಲ್ಲಿಯೂ ಹೆಣ್ಣಿಗೆ ಬದುಕಿನ ಶಿಷ್ಟಾಚಾರಗಳೊಂದಿಗೆ ಪ್ರಜ್ಞಾವಂತಿಕೆಯ ಶಿಕ್ಷಣ, ತರಬೇತಿ ನೀಡುವುದು ತಂದೆ–ತಾಯಿ ಹಾಗೂ ಪತಿಯ ಪುಣ್ಯದ ಕಾರ್ಯವೆಂದು ಪ್ರವಾದಿ ಮಹಮ್ಮದರು ಹೇಳಿದ್ದಾರೆ. ಸಾಮಾಜಿಕ ಸಮೃದ್ಧಿ ಕಾಳಜಿಯ ಉದ್ದೇಶವನ್ನು ಮಹಿಳೆಯ ಶಿಕ್ಷಣದ ಮೂಲಕ ಫಲ ಪ್ರದಗೊಳಿಸುವ, ಆಕೆ ಅದರಿಂದ ಸಾರ್ಥಕತೆ ಪಡೆದುಕೊಳ್ಳುವ ಜರೂರತೆಯನ್ನು ಅವರು ಸ್ಪಷ್ಟಪಡಿಸುತ್ತಾರೆ.

ಪ್ರವಾದಿ ಮಹಮ್ಮದ್‌ರ ಪ್ರೀತಿಯ ಪತ್ನಿ ಆಯಿಷಾ ಅವರು ಭಾಷೆ, ಕಾವ್ಯ, ಸಾಹಿತ್ಯ, ವೈದ್ಯಕೀಯ ಹಾಗೂ ಗಣಿತಜ್ಞಾನದಲ್ಲಿ ಪ್ರಬುದ್ಧ ತಿಳುವಳಿಕೆ ಹೊಂದಿದ್ದು, ಉಮ್ಮು ಸಲ್ಮಾರ ಮಗಳು ಝೀನಬ್ ಉಮ್ಮುದರ್ದಾ, ಫಾತಿಮಾ ಬಿಸ್ತಿ ಕೈಸ್ ಬಹುದೊಡ್ಡ ವಿದ್ವಾಂಸೆಯರಾಗಿದ್ದು, ಉಮ್ಮು ಸಲ್ಮಾ ಅವರ ಓರ್ವ ಸೇವಕಿ ಉಮ್ಮುಲ್ ಹಸನ್ ಮಹಿಳೆಯರಿಗೆ ಪ್ರವಚನ ಮತ್ತು ಉಪದೇಶ ನೀಡುತ್ತಿದ್ದುದು, ಸ್ತ್ರೀಯರ ವಿದ್ಯಾಭ್ಯಾಸಕ್ಕಾಗಿ ಕೈರೊ, ಡಮಾಸ್ಕಸ್, ಬಗ್‌ದಾದ್, ಕಾರ್ಡೋವ್ ಮೊದಲಾದ ಕೇಂದ್ರಗಳಲ್ಲಿ ವಿದ್ಯಾಶಾಲೆಗಳಿದ್ದುದು ಇಲ್ಲಿ ಉಲ್ಲೇಖಾರ್ಹ.

ಭಾರತದಂಥ ದೇಶದಲ್ಲಿ ಶಿಕ್ಷಣದ ಬಗ್ಗೆ ಮಾತನಾಡುವಾಗ ಆದಿಯಿಂದ ಚಲಾವಣೆಯಲ್ಲಿರುವ ವರ್ಣಾಶ್ರಮ ವ್ಯವಸ್ಥೆಯನ್ನು ಮರೆಯುವುದಕ್ಕೆ ಸಾಧ್ಯವಿಲ್ಲ. ಚಾತುವರ್ಣ್ಯ ಪದ್ಧತಿ ವಿದ್ಯೆಯನ್ನು ಮುಕ್ತವಾಗಿರಿಸದೆ ಧರ್ಮಶಾಸ್ತ್ರೀಯವಾಗಿ ನಿಯಂತ್ರಿಸಿತ್ತು. ಭಾರತದಲ್ಲಿನ ವಸಾಹತುಶಾಹಿ ಆಡಳಿತ ಮತ್ತು ಕ್ರೈಸ್ತ ಮಿಶನರಿಗಳ ಪ್ರಯತ್ನಗಳು ಭಾರತದಲ್ಲಿ ಹಿಂದುಳಿದ, ಶೂದ್ರ, ದಲಿತ ಮತ್ತು ಮುಸ್ಲಿಂ ಜನಾಂಗಗಳು ಅಕ್ಷರ ವಂಚಿತರಾಗಲು ಸಾಧ್ಯವಾಯಿತು. ಸ್ವಾತಂತ್ರ್ಯ ದೊರೆತು ಆರು ದಶಕಗಳೇ ಕಳೆದರೂ ಇಂದಿಗೂ ನಾವು ಸಂಪೂರ್ಣ ಸಾಕ್ಷರತೆಯನ್ನು ಸಾಧಿಸುವಲ್ಲಿ ವಿಫಲರಾಗಿದ್ದೇವೆ. ಮುಸ್ಲಿಂ ಜನಾಂಗದಲ್ಲಿ ಶಿಕ್ಷಣ ಪಡೆದವರಿಗಿಂತ ಪಡೆಯದವರ ಸಂಖ್ಯೆಯೇ ಹೆಚ್ಚಾಗಿದೆ. ಶಿಕ್ಷಣ

ಪಡೆದ ಮೊದಲ ತಲೆಮಾರಿನ ಮುಸ್ಲಿಂರ ಸಮಸ್ಯೆಗಳು ಮತ್ತು ಸಂದಿಗ್ಧತೆಗಳು ಕೂಡ ತುಂಬಾ ಸಂಕೀರ್ಣವಾಗಿವೆ. ಇದರ ನಿದರ್ಶನಕ್ಕೆ ದಲಿತ ಕವಿ ದೇವನೂರು ಮಹಾದೇವರ ಮಾತುಗಳನ್ನೇ ಉಲ್ಲೇಖಿಸುವುದಾದರೆ 'ನಾನು ಆಕಸ್ಮಾತ್ತು ಓದಿದವನು ಹಾಗೇನೇ ಆಕಸ್ಮಾತ್ತು ಕಥೆಯೋ ಕವನಾನೋ ಬರೆದವನು. ಈ ಆಕಸ್ಮಿಕಗಳಲ್ಲಿ ಏನಾರು ಒಂದು ಹಳಿ ತಪ್ಪಿದ್ದರೆ ನಾನು ಇಲ್ಲಿರ್ತಿರಲಿಲ್ಲ. ಎಲ್ಲೋ ನಮ್ಮೂರಲ್ಲೊ ಜೀತ ಮಾಡ್ತ ಇರಬೇಕಿತ್ತು... ಒಂದೊಂದು ಸಲ ಅನ್ಸುತ್ತೆ ಈ ಓದೋ ಚಾನ್ಸೇ ಬರಬಾರದಿತ್ತು. ನಾನು ಹತ್ತು ವರ್ಷದ ಕೆಳಗೆ ಹುಟ್ಟಬೇಕಿತ್ತು. ಆಗ ಓದೋ ಬಾಬತ್ತೆ ಇರ್ಲಿಲ್ಲ. ಯಾಕೆ ಹೀಗೆ ಹೇಳ್ತಾ ಇದ್ದೀನಿ ಅಂದ್ರೆ ಇಂದು ಒಬ್ಬ ಆದಿ ಜನಾಂಗದೋನು ಅಲ್ಪ ಸ್ವಲ್ಪ ಪ್ರಜ್ಞೆ ಪಡೆಯೋದೆ ಅಪರೂಪ ಪಡೆದರೆ ಅದೊಂದು ರೌರವನರಕ. ಯಾಕೆಂದರೆ ಅವನಿಗೆ ಅಲ್ಪಸ್ವಲ್ಪ ತಿಳುವಳಿಕೆ ಬರುತ್ತೆ. ಅವನಿಗೆ ಕಾಣುತ್ತೆ... ತನ್ನ ಸಂಬಂಧಿಗಳು ಹಸಿವಿನಿಂದ ಸಾಯ್ತಾ ಇರೋದು, ಬೀದೀಲಿ ಭಿಕ್ಷೆ ಬೇಡೋದು, ಜೀವಂತ ಸುಡಿಸಿಕೊಳ್ಳೋದು, ಪಶುಥರ ದುಡಿಯೋದು ಅವ ದುಡಿಯೋದು ಅವಗೆ ದಕ್ಕದೆ ಇರೋದು. ಇದರ ಜೊತೆಗೆ ಹುಟ್ಟಿದ ತಪ್ಪಗೆ ಛೀ ಛೀ... ಅನ್ನಿಸಿಕೊಳ್ಳೋದು ಕೂಡ ಸೇರುತ್ತದೆ. ಇಷ್ಟೆಲ್ಲಾ ಆಗ್ತಾ ಇರೋದು ನನ್ನ ಸಂಬಂಧಿಗಳಿಗೇನೆ. ಈ ಸಂಬಂಧ ಇಲ್ಲದಿದ್ರೆ ನನಗೆ ಭಾವನಾತ್ಮಕ ನೋವು ಆಗ್ತಾ ಇರಲಿಲ್ಲವೇನೋ, ಓರ್ವ ಸಂವೇದನಾಶೀಲ ವಿದ್ಯಾವಂತ ದಲಿತನ ನೋವಿನ ಸಂಕೀರ್ಣತೆಗಳು ಈ ಮಾತುಗಳಲ್ಲಿವೆ. ಗ್ರಾಮೀಣ ಪ್ರದೇಶದಲ್ಲಿ ಇನ್ನೂ ಅನಕ್ಷರಸ್ಥರಾಗುಳಿದು ತಮ್ಮ ದುಡಿಮೆಯ ಫಲವನ್ನು ಅನುಭವಿಸಲಾರದ ಸಂದಿಗ್ಧ ಸ್ಥಿತಿಯಲ್ಲಿ ಬಹುಸಂಖ್ಯಾಂತ ಮುಸ್ಲಿಂ ವರ್ಗವಿದೆ.

ದೇಹಶಕ್ತಿ ಮತ್ತು ಬುದ್ಧಿಶಕ್ತಿಗಳನ್ನು ಅಭಿವೃದ್ಧಿ ಪಡಿಸಿಕೊಂಡು ಆರ್ಥಿಕ ಸ್ವಾವಲಂಬನೆಗಾಗಿ ಸಹಾಯಕವಾಗಬೇಕಾದ ಶಿಕ್ಷಣದಿಂದ ಗ್ರಾಮೀಣ ಮುಸ್ಲಿಂ ಬಡಮಹಿಳೆಯರು ವಂಚಿತರಾಗಿದ್ದ ಕಾಲವೊಂದಿತ್ತು. ಅದಕ್ಕೆ ನಿದರ್ಶನ ಕಟ್ಪಾಡಿಯವರ ಕಾದಂಬರಿಗಳಲ್ಲಿ ಬರುವ ಗ್ರಾಮೀಣ ಮಹಿಳೆಯರು ಅವರು ವಿದ್ಯಾವಂತರಲ್ಲ. ಜೊತೆಗೆ ಅವರಿಗಿರುವ ಬಡತನ, ಅಜ್ಞಾನದಿಂದಾಗಿ ಮೇಲ್ಜಾತಿ ಮತ್ತು ಮೇಲ್ವರ್ಗದವರಿಂದ ನಿರಂತರವಾಗಿ ಶೋಷಿಸಲ್ಪಡುತ್ತಾರೆ.

ಇಂಥ ಸಂದಿಗ್ಧತೆಯಲ್ಲಿ ಗ್ರಾಮೀಣ ಮಹಿಳೆಯರ ಶಿಕ್ಷಣವು ಸಂಕೀರ್ಣವಾದ ವಿಷಯವಾಗುತ್ತದೆ. ಪುರುಷ ಪ್ರಧಾನ ವ್ಯವಸ್ಥೆಯೊಳಗಿನ ಲಿಂಗ ತಾರತಮ್ಯದ ಅಡಿಯಲ್ಲಿ ಈ ಸಮಸ್ಯೆಯು ಮತ್ತಷ್ಟು ಜಟಿಲವಾದುದಾಗಿದೆ. ಇಂದು ಮದರಸಾಗಳಲ್ಲಿ ಮತ್ತು ಕುರಾನ್ ಓದುವುದನ್ನು ಕಲಿಸುವ ಮಟ್ಟಿಗೆ ಸೀಮಿತವಾಗಿರುವುದನ್ನು ಅಲ್ಲಗಳೆಯುವಂತಿಲ್ಲ.

ಫಕೀರ್ ಮುಹಮ್ಮದ್ ಕಟ್ಪಾಡಿ ಅವರ 'ಸರಕುಗಳು' ಕಾದಂಬರಿಯಲ್ಲಿ ಹಾಜಿಮ ತನ್ನ ಮಗ ಮಮ್ಮುಟ್ಟಿಯನ್ನು ಕಷ್ಟಪಟ್ಟು ಎಸ್.ಎಸ್.ಎಲ್.ಸಿ ತನಕ ಪಟ್ಟು ಹಿಡಿದು ವಿದ್ಯಾಭ್ಯಾಸ ಕೊಡಿಸುತ್ತಾಳೆ. "ತನ್ನ ಮಗ ಕಟ್ಟಕಡೆಗೆ ಸರಕಾರಿ ಗುಮಾಸ್ತನಾದರೂ ಆಗಬೇಕೆನುವುದು ಅವಳ ಕನಸಾಗಿತ್ತು"[೧೮]

ಎನ್ನುವಲ್ಲಿ ಕಡಲ ತೀರದ ಗುಡಿಸಲುಗಳಲ್ಲಿ ವಾಸಿಸುವ ಹಾಜಿಮ ತನ್ನ ಮಗ ಓದಬೇಕು ಉದ್ಯೋಗಕ್ಕೆ ಸೇರಬೇಕು ಎಂಬ ಹಂಬಲ ವ್ಯಕ್ತವಾಗಿದೆ. ಆದರೆ ಅದೇ ತನ್ನ ಹೆಣ್ಣು ಮಕ್ಕಳಾದ ಜುಲೇಖಾ, ಹಫ್ಸಾರು, ನಫೀಸಾಳರನ್ನು ಶಾಲೆಗೆ ಕಳುಹಿಸುವ ವಿಚಾರದಲ್ಲಿ ತಲೆಕೆಡಿಸಿಕೊಳ್ಳುವುದಿಲ್ಲ. ಕುಟುಂಬದಲ್ಲಿರುವ ಬಡತನ, ದಾರಿದ್ರ್ಯ ಒಂದು ಕಾರಣವಾದರೆ ಹೆಣ್ಣಿಗೆ ವಿದ್ಯಾಭ್ಯಾಸದ ಅಗತ್ಯ ಇಲ್ಲವೆ ಇಲ್ಲ. ಧಾರ್ಮಿಕ ವಿದ್ಯಾಭ್ಯಾಸ ಮಾತ್ರ ಕೊಡಿಸಿದರೆ ಸಾಕು"[೧೯] ಎಂಬ ಸಾಂಪ್ರದಾಯಿಕ ಧೋರಣೆ ಮತ್ತೊಂದು ಕಾರಣ. "ಯಾವುದೇ ಒಂದು ಜನಾಂಗದಲ್ಲಿ ಹರಡಿರುವ ಮೂಡನಂಬಿಕೆ, ಅನಾಚಾರಗಳನ್ನು ಹೊಡೆದೋಡಿಸಿ ಅವರನ್ನು ಸುಸಂಸ್ಕೃತರಾಗಿಸಲು ವಿದ್ಯಾಭ್ಯಾಸ ಅತೀ ಅಗತ್ಯವೆಂಬುದನ್ನು ಪೈಗಂಬರರು ಮನಗಂಡಿದ್ದರು. ಹಾಗಾಗಿಯೆ ಹೆಣ್ಣು-ಗಂಡುಗಳೆಲ್ಲರೂ ವಿದ್ಯಾಭ್ಯಾಸ ಪಡೆಯಬೇಕೆಂದು ಅವರು ಬೋಧಿಸತೊಡಗಿದರು. ಏಳನೆಯ ಶತಮಾನದ ಸಂದರ್ಭದಲ್ಲಿ ಶೈಕ್ಷಣಿಕವಾಗಿ ಚೀನಾ ದೇಶ ಬಹಳ ಮುಂದುವರೆದಿದ್ದ ಕಾರಣ ಹೆಣ್ಣು ಗಂಡುಗಳೆಲ್ಲರೂ ವಿದ್ಯೆ ಪಡೆಯಬೇಕೆಂದು ತಮ್ಮ ಅನುಯಾಯಿಗಳಿಗೆ ಕರೆನೀಡಿದರು. ತಮ್ಮ ಮಕ್ಕಳನ್ನು ನಾಳಿನ ನಾಗರೀಕ ಪ್ರಜೆಗಳಾಗಿ ಬೆಳೆಸಬೇಕಾದವಳು ತಾಯಿಯಾದ ಕಾರಣ, ಇಂದಿನ ಹೆಣ್ಣುಮಕ್ಕಳನ್ನು ನಾಳಿನ ತಾಯಿ ಎಂಬುದನ್ನು ಮನವರಿಕೆ ಮಾಡಿಸಿ ಹೆಣ್ಣು ಮಕ್ಕಳಿಗೆ ಶಿಕ್ಷಣದ ಅಗತ್ಯವನ್ನು ಒತ್ತಿ ಹೇಳಿದರು. ಹೆಣ್ಣು ಮಕ್ಕಳನ್ನು ಶಿಕ್ಷಣದ ಅವಕಾಶದಿಂದ ವಂಚಿಸಿ ನಾಲ್ಕು ಗೋಡೆಗಳಿಗೆ ಬಂಧಿಸಿಡಬೇಕೆಂದು ಪೈಗಂಬರರು ಎಂದು ಬೋಧಿಸಲಿಲ್ಲ. ಹೆಣ್ಣು-ಗಂಡಿನ ನಡುವೆ ತಾರತಮ್ಯವಿಲ್ಲದಂತೆ 'ಹೆಣ್ಣಿನಿಂದ ಗಂಡನ್ನು ಗಂಡಿನಿಂದ ಹೆಣ್ಣನ್ನು ಸೃಷ್ಟಿಸಿದೆ'? ಎಂಬ ದೇವ ವಾಕ್ಯ ಖುರ್‌ಆನಿನಲ್ಲಿದೆ"[೨೦]

ಸೈದುಕೋಯಾರರು ಶ್ರೀಮಂತರಾದರು ತನ್ನ ಮಗ ಸಲೀಮ್‌ನನ್ನು ಮಾತ್ರ ತುಂಬಾ ಪ್ರೀತಿಯಿಂದ ಎಂ.ಎ. ತನಕ ವಿದ್ಯಾಭ್ಯಾಸ ಕೊಡಿಸುತ್ತಾರೆ. ಮಗ ಕಲ್ಲಿಕೋಟೆ ಕಾಲೇಜಿನಲ್ಲಿ ಲೆಕ್ಚರರ್ ಆಗ್ತಾನೆ ಎಂಬ ಕನಸು ಆದರೆ ತನ್ನ ಹೆಣ್ಣು ಮಗಳಾದ ಜುಬೇದಾಳಿಗೆ ಶಾಲೆಗೆ ಕಳುಹಿಸುವ ವಿಚಾರದಲ್ಲಿ ತಲೆ ಕಡೆಸಿಕೊಳ್ಳುವುದಿಲ್ಲ. ಕಾರಣ ಸ್ತ್ರೀಗೆ ಹೊರಪ್ರಪಂಚದ ಜ್ಞಾನ ಅಗತ್ಯವಿಲ್ಲ. ಧಾರ್ಮಿಕ ವಿದ್ಯಾಭ್ಯಾಸ ಮಾತ್ರ ಕೊಡಿಸಿದರೆ ಸಾಕು ಎಂಬ ಧೋರಣೆ. ಪುರುಷ ಪ್ರಧಾನ ವ್ಯವಸ್ಥೆಯ ಲಿಂಗ ತಾರತಮ್ಯವನ್ನು ಸೂಚಿಸುತ್ತದೆ. ಫಕೀರ್ ಮುಹಮ್ಮದ್ ಕಟ್ಪಾಡಿಯವರ ಮತ್ತೊಂದು ಕಾದಂಬರಿಯಾದ 'ಕಚ್ಚಾದ'ದಲ್ಲಿ ಕೂರಗಪ್ಪ ಎಂಬಾತನು ಐದನೇ ಕ್ಲಾಸಿನಲ್ಲಿ ಕಲಿಯುತ್ತಿದ್ದ. ಅವನನ್ನು "ಶಾಲೆಯಿಂದ ಬಿಡಿಸಿ ಗದ್ದೆ ಕೂಲಿ ಕೆಲಸಕ್ಕೆ ಕಳುಹಿಸತೊಡಗಿದನು. ಕೂರಗಪ್ಪನನ್ನು ಚೆನ್ನಾಗಿ ಓದಿಸಿ ವಿದ್ಯಾವಂತನನ್ನಾಗಿ ಮಾಡಿ ಬೊಂಬಾಯಿಗೆ ಆಫೀಸು ಕೆಲಸಕ್ಕೆ ಕಳುಹಿಸಬೇಕೆಂದು ಕನಸುಕಾಣುತ್ತಿದ್ದ ಬಾಬು ಪೂಜಾರಿಯ ಆಸೆಯೆಲ್ಲಾ ಮಣ್ಣು ಪಾಲದದ್ದರಿಂದ

ಚಿಂತೆ ಹಚ್ಚಿಕೊಂಡಿತು"[೨೧] ಎನ್ನುವಲ್ಲಿ ಬಡತನ ಅವನನ್ನು ಶಾಲೆಯಿಂದ ದೂರಮಾಡಿತು. ಇದರಿಂದ ಬಾಬು ಪೂಜಾರಿಯ ಕನಸೇಲ್ಲಾ ನುಚ್ಚುನೂರಾಯಿತು. ಇದರ ನಿದರ್ಶನಕ್ಕೆ ಮಹದೇವ ಕುಕ್ಕರಹಳ್ಳಿಯವರ ಪದ್ಯ ಉಲ್ಲೇಖಿಸುವುದು ಸಮಂಜಸವೆನಿಸುತ್ತದೆ.

"ಎಲ್ಲಾ ಮಕ್ಕಳು ಇಲ್ಲಿ
ಹೊಟ್ಟೆ ತುಂಬ ಉಂಡು, ಮೈತುಂಬ ಉಟ್ಟು ಕಣ್ಣಲ್ಲಿ
ನೂರಾರು ಕನಸುಗಳ ತುಂಬಿ
ಕಂಪ್ಯೂಟರಿನ ಮುಂದೆ ಕುಳಿತಿರುವಾಗ
ನಮ್ಮ ಮಕ್ಕಳು ಮಾತ್ರ
ಅರೆಬೆತ್ತಲೆಯಾಗಿ ಅರೆ ಹೊಟ್ಟೆಯಲ್ಲೇ ಸಂತೃಪ್ತರಾಗಿ
ಕನಸುಗಳೇ ಇಲ್ಲದ ಕಣ್ಣು ಬಿಟ್ಟು
ನೆಲಕ್ಕೆ ಅಂಡೂರಿ ಮಣ್ಣಿನಾಟವಾಡುತಿರಲು
ಸೂಗಸು ಎನ್ನಲೆ ಬದುಕನು?"[೨೨]

ಇಂಡಿಯಾದಲ್ಲಿ ಇಷ್ಟೆಲ್ಲಾ ಸಮಸ್ಯೆಗಳಿದ್ದರೂ 'ಭಾರತ ಪುಣ್ಯವಂತರ ಭೂಮಿ' ಎಂದು ನಂಬಿಸಲಾಗಿದೆ. 'ಕನ್ನಡ ನಾಡು ಚಿನ್ನದ ನಾಡು ಎಂಬುದನ್ನು ಹಾಡಿ ಹೊಗಳಲಾಗಿದೆ. ಇದು ಶಾಲೆ ಕಲಿಯಲು ಸೇರುವ ಮಗುವಿನ ಪಠ್ಯ ಪುಸ್ತಕದ ಬೋಧನೆಯಿಂದಲೇ ಪ್ರಾರಂಭವಾಗಿರುತ್ತದೆ.

'ಕಚ್ಚಾದ'ಳ ಮಗನಾದ ಆಲಿಯಬ್ಬ "ಶಾಲೆಯ ಮಾಸ್ತರರೊಬ್ಬರ ಒತ್ತಾಯಕ್ಕೆ ಹಿಂದೊಮ್ಮೆ ಆಲಿಯಬ್ಬನನ್ನು ಒಂದನೆಯ ಕ್ಲಾಸಿಗೆ ಸೇರಿಸಿದ್ದಳು. ಮಾಸ್ತರರೇ ತನ್ನ ಕೈಯಿಂದ ಹಣಹಾಕಿ ಸ್ಲೇಟು, ಪುಸ್ತಕ, ಚೀಲ ಕೊಡಿಸಿದ್ದರು. ಒಮ್ಮೆ ಅರ್ಧದಲ್ಲೆ ಎದ್ದು ಬಂದು "ನಾನಿನ್ನು ಶಾಲೆಗೆ ಹೋಗುವುದಿಲ್ಲಮ್ಮ, ಟೀಚರು ನನಗೆ ಹೊಡೆಯುತ್ತಾಳೆ" ಎಂದು ಶಾಲೆಗೆ ಹೋಗುವುದನ್ನು ನಿಲ್ಲಿಸಿದನು. ಪ್ರೀತಿಯಿಂದ ಕಚ್ಚಾದ ಆಲಿಯಬ್ಬನನ್ನು ಬೆಳೆಸಿದ್ದಳು. ಆ ಕಾರಣಕ್ಕಾಗಿ ಶಾಲೆಗೆ ಹೋಗುವುದು ಬೇಡ ಮನೆಯಲ್ಲಿ ಆಡಿಕೊಂಡಿರು ಎಂದಳು. ಕಾರಣವಿಷ್ಟೇ ಕಚ್ಚಾದ ಅವಿದ್ಯಾವಂತಳು. ಆದ ಕಾರಣ ಅವನನ್ನು ಬೈದು ಶಾಲೆಗೆ ಕಳುಹಿಸಲಿಲ್ಲ. "ಹೆಣ್ಣು ಸಮಾಜದ ಅರ್ಧಭಾಗ ಮಾತ್ರ ಅಲ್ಲ. ಆಕೆ ಮುಂದಿನ ಪೀಳಿಗೆಯ ತಾಯಿಯೂ ಹೌದು. ಅಶಿಕ್ಷಿತ ತಾಯಿ ಅಶಿಕ್ಷಿತರ ತಾಯಿಯಾಗಬಲ್ಲಳು. ತನ್ನ ಅರ್ಧ ಭಾಗವನ್ನು, ತನ್ನ ಮಾತೆಯನ್ನು ಅಜ್ಞಾನದ ಕತ್ತಲಲ್ಲಿ ಕಟ್ಟಿಡುವ ಸಮಾಜ ಬೆಳಕನ್ನು ಪಡೆಯಲಾರದು"[೨೩] ಎಂಬ ಮಾತು ಇದನ್ನು ಪುಷ್ಟೀಕರಿಸುತ್ತದೆ.

ಕಚ್ಚಾದ ಪಕ್ಕದ ಮನೆಯ ಫಾತೀಮಾ ಪೇಟೆಯಲ್ಲಿ ಹುಟ್ಟಿ ಬೆಳೆದವಳಾದ್ದರಿಂದ ಮಕ್ಕಳಿಗೆ

ವಿದ್ಯೆ ಬುದ್ಧಿ ಕಲಿಸಬೇಕೆನ್ನುವವಳು. ಕಚ್ಚಾದ ಮಗನನ್ನು ಶಾಲೆಗೆ ಕಳುಹಿಸದಿರುವುದನ್ನು ಕಂಡಾಗ ಅವಳಿಗೆ ತುಂಬಾ ಅಸಹ್ಯವಾಗುತ್ತಿತ್ತು. ಕೆಲವೊಮ್ಮೆ ಕಚ್ಚಾದಳೊಂದಿಗೆ ಮಾತನಾಡುತ್ತಾ "ಒಂದು ಎರಡು ಲೆಕ್ಕ ಮಾಡುವುದಕ್ಕಾದ್ರೂ, ಒಂದು ದಸ್ಕತ್ತು ಹಾಕುವುದಕ್ಕಾದ್ರೂ ನಾಲ್ಕಕ್ಷರ ಮಕ್ಳು ಕಲೀಬೇಕು"[೨೪] ಎಂದಿದ್ದಳು. ಫಾತೀಮಾಳ ಉಪದೇಶದಿಂದ ಕೋಪಗೊಂಡ ಕಚ್ಚಾದ "ಸಾಕು ಹೋಗೇ ವಯ್ಯಾರಿ, ನನ್ನ ಮಗ ಕಲ್ತು ವಕೀಲನಾಗ್ಬೇಕಾಗಿಲ್ಲ ಕಣೆ, ನಿನ್ ಮಗನನ್ನು ಬೇಕಿದ್ರೆ ವಕೀಲಿ ಕಲ್ಸು"[೨೫] ಎಂದು ದಬಾಯಿಸಿ ಕಳುಹಿಸಿದಳು. ಶಾಲೆಗೆ ಹೋಗದೆ ಹಟ ಹಿಡಿದಿರುವ ಮಕ್ಕಳಿಗೆಲ್ಲಾ ನೆರೆ ಹೊರೆಯ ತಾಯಂದಿರು ತಮ್ಮ ಮಕ್ಕಳಿಗೆ ಕುಂಡೆಗೆ ಬಾರಿಸಿ "ನಿಮ್ಮನ್ನು ಶಾಲೆಗೆ ಕಳಿಸದೆ ಹಾಗೇ ಕೂರ್‍ಸಿಕೊಳ್ಳಲಿಕ್ಕೆ ನಾನೇನು ಕಚ್ಚಾದನಾ..." ಎನ್ನುತ್ತಿದ್ದರು. ಇಲ್ಲವೇ ಶಾಲೆಗೆ ಕಳುಹಿಸದೆ ಕಚ್ಚಾದಳ ಹಾಗೆ ಕೊಂಡಾಟ ಮಾಡ್ತೇನೆಂದುಕೊಂಡಿರೇನು?[೨೬] ಎನ್ನತೊಡಗಿದ್ದರು. ಇದರಿಂದ ನಮ್ಮಗೆ ತಿಳಿಯುವುದೇನೆಂದರೆ ಆಧುನಿಕತೆಯ ಗಾಳಿ ಗ್ರಾಮಗಳಿಗೆ ಆಗಲೇ ಪ್ರವೇಶಿಸಿತು. ಶಿಕ್ಷಣದ ಮಹತ್ವವನ್ನರಿತ ತಾಯಂದಿರು ತಮ್ಮ ಮಕ್ಕಳಿಗೆ ವಿದ್ಯಾಭ್ಯಾಸವನ್ನು ನೀಡತೊಡಗಿದ್ದರು.

"ಕೇರಳದಲ್ಲಿ ಅತ್ಯಧಿಕ ಮುಸ್ಲಿಂ ಜನಸಾಂದ್ರತೆ ಇರುವ ಹಾಗೂ ಅತ್ಯಂತ ಹಿಂದುಳಿದ ಜಿಲ್ಲೆ ಮಲ್ಲಪ್ಪುರಂ. ಇಂದಿನ ಧಾರ್ಮಿಕ ಮೂಲಭೂತವಾದದಿಂದಾಗಿ ಇಂದು ಈ ಜಿಲ್ಲೆಯಲ್ಲಿ ನಾಲ್ಕು ವರ್ಷದ ಹೆಣ್ಣು ಮಕ್ಕಳು ಕೂಡ ಬುರ್ಖಾ ಹಾಕಿಕೊಳ್ಳಬೇಕಾಗಿದೆ. ಬುರ್ಖಾಧರಿಸದ ಹೆಣ್ಣು ಮಕ್ಕಳನ್ನು ಶಾಲೆಯಿಂದ ಹೊರಗೆ ಕಳುಹಿಸಲಾಗುತ್ತದೆ. ಮದರಸಗಳಲ್ಲಿ ಪ್ರಾರಂಭದಿಂದಲೇ ಈ ಹೆಣ್ಣು ಮಕ್ಕಳ ತಲೆಯೊಳಗೆ 'ನೀನು ಹೆಣ್ಣು, ಗಂಡ ಹೇಳಿದಂತೆ ಕೇಳಿಕೊಂಡಿರಬೇಕಾದವಳು, ನೀವು ಹುಟ್ಟಿರುವುದೇ ಗಂಡಿಗಾಗಿ, ಗಂಡನನ್ನು ಸಂತೋಷ ಪಡಿಸುವುದಕ್ಕಾಗಿ ತಲೆಯಿಂದ ಕಾಲಿನವರೆಗೂ ಮರೆಮಾಡಿಕೊಂಡು ಗಂಡನ ನೆರಳಾಗಿ ಬದುಕಬೇಕು. ಇಹಲೋಕದಲ್ಲಿ ಏನನ್ನು ಆಶಿಸಬಾರದು' ಎಂಬ ಮಾತುಗಳನ್ನು ತುರುಕಲಾಗುತ್ತದೆ. ಮದುವೆಯೇ ಹೆಣ್ಣು ಮಕ್ಕಳ ಬದುಕಿನ ಏಕೈಕ ಗುರಿ ಎಂಬಂತೆ ಬಿಂಬಿಸಲಾಗುತ್ತದೆ"[೨೭]

ಮೊಟ್ಟಮೊದಲಿಗೆ ಶೇಕಡಾ ನೂರು ಸಾಕ್ಷರತೆಯನ್ನು ಸಾಧಿಸಿದ ನಾಡು ಕೇರಳದಲ್ಲಿಯೇ ಪ್ರಾಥಮಿಕ ತರಗತಿಯಿಂದಲೇ ಹೆಣ್ಣು ಮಕ್ಕಳ ವಿದ್ಯಾಭ್ಯಾಸವನ್ನು ನಿಲ್ಲಿಸಲು ಧಾರ್ಮಿಕ ಗುರುಗಳು ಮತ್ತು ಮೂಲಭೂತವಾದಿಗಳು ಒತ್ತಾಯಿಸುತ್ತಿದ್ದಾರೆ! ಇಂಥ ಸಂದಿಗ್ಧ ಪರಿಸ್ಥಿತಿಯೊಳಗೆ ನಮ್ಮ ದೇಶದ ಗ್ರಾಮೀಣ ಪ್ರದೇಶಗಳಲ್ಲಿ ಇನ್ನು ಬಡತನ, ದಾರಿದ್ರ್ಯ ನಿರಕ್ಷರತೆಯಲ್ಲಿ ಮುಳುಗಿರುವ ಬಡ ಮುಸ್ಲಿಂ, ದಲಿತ ಮಹಿಳೆಯರನ್ನು ಹೇಗೆ ತಾನೇ ಶಿಕ್ಷಣ ಸೌಲಭ್ಯ ಕೂಡಲು ಹಾಗೂ ಉದ್ಯೋಗದ ಮಟ್ಟಕ್ಕೆ ಹೊರತರಲು ಸಾಧ್ಯ ಎಂಬುದನ್ನು ಆಲೋಚಿಸಬೇಕಾಗುತ್ತದೆ. ದಿನನಿತ್ಯದ

ಬವಣೆಗಳಿಂದ ಹೊರಬರಲಾಗದ ಸನ್ನಿವೇಶದೊಳಗೆ ಮುಸ್ಲಿಂ ಹೆಣ್ಣು ಮಕ್ಕಳು ಶಿಕ್ಷಣದ ಬಗ್ಗೆ ಜಾಗೃತಿ ಹೊಂದುವುದು ಅಸಾಧ್ಯವಾಗುತ್ತದೆ.

ಆದರೆ ಈಗ ಕಾಲ ಬದಲಾಗಿದ್ದು ಮುಸ್ಲಿಂ ಸಮಾಜದ ಮೇಲ್ವರ್ಗದವರು ತಮ್ಮ ಹೆಣ್ಣು ಮಕ್ಕಳನ್ನು ಕಾಲೇಜಿನವರೆಗೂ ಓದಿಸುತ್ತಿದ್ದಾರೆ. ಆದರೆ ಕೆಳವರ್ಗದ ಗ್ರಾಮ್ಯನೆಲೆಯ ಮುಸ್ಲಿಂ ಮಹಿಳೆಗೆ ಇದು ಸಾಧ್ಯವಾಗುತ್ತಿಲ್ಲ. ಇಂದಿಗೂ ಶೈಕ್ಷಣಿಕವಾಗಿ ಆರ್ಥಿಕವಾಗಿಯೂ ಹಿಂದುಳಿದಿರುವಿಕೆಗೆ ತಾಯಂದಿರ ನಿರಕ್ಷರತೆಯೇ ಬಹುಮುಖ್ಯ ಕಾರಣ. "ಕೆಲವೆಡೆಗಳಲ್ಲಿ ಶೇಕಡಾ ೯೦ರಷ್ಟು ಮುಸ್ಲಿಂರಿಗೆ ಸಿವಿಲ್ ಸರ್ವಿಸ್ ಬ್ಯಾಂಕಿಂಗ್, ಮ್ಯಾನೇಜೆಮೆಂಟ್, ಚಾರ್ಟರ್ಡ್ ಅಕೌಂಟೆಂಟ್ ಮುಂತಾದ ಉನ್ನತ ಹುದ್ದೆಗಳ ಕಲ್ಪನೆಯೇ ಇಲ್ಲ! ೬ ರಾಜ್ಯಗಳ ೫೫ ಜಿಲ್ಲೆಗಳಲ್ಲಿ ಶೇಕಡಾ ೧೫ ರಿಂದ ೧೮ರವರೆಗೆ ಮುಸ್ಲಿಂ ಜನಸಂಖ್ಯಾ ಇದ್ದರೂ ಶೇ೧.೫ರಷ್ಟು ಕುಟುಂಬಗಳು ಮಾತ್ರ ತಮ್ಮ ಮಕ್ಕಳನ್ನು ಪ್ರಾಥಮಿಕ ಶಾಲೆಗೆ ಸೇರ್ಪಡೆಗೊಳಿಸುತ್ತಾರೆ. ಇವರಲ್ಲಿ ಶೇಕಡಾ೬೭ಕ್ಕಿಂತ ಹೆಚ್ಚು ಮಕ್ಕಳು ಪ್ರಾಥಮಿಕ ತರಗತಿಯಲ್ಲಿ ಶಾಲೆ ತ್ಯಜಿಸುತ್ತಾರೆ. ಪ್ರೌಢಶಿಕ್ಷಣದ ಹಂತ ತಲುಪುವಾಗಲೇ ೨.೩%ರಷ್ಟು ಮಾತ್ರ ಇರುತ್ತಾರೆ. ಪದವಿ ತರಗತಿಯಲ್ಲಿ ೧%ರಷ್ಟು ಮಾತ್ರ ಪ್ರಾಥಮಿಕ ಹಂತದಲ್ಲಿ ೧೦೦ ಹೆಣ್ಣುಮಕ್ಕಳು ಶಾಲೆಗೆ ನೊಂದಣಿಯಾದರೆ ಕೇವಲ ೬%ರಷ್ಟು ಹೆಣ್ಣುಮಕ್ಕಳು ಮಾತ್ರ ಶಾಲಾ ಶಿಕ್ಷಣ ಕೊನೆಗೊಳಿಸುತ್ತಾರೆ. ಉತ್ತರ ಪ್ರದೇಶ, ರಾಜಾಸ್ಥಾನ ಮತ್ತು ಬಿಹಾರದ ೧೨ ಜಿಲ್ಲೆಗಳಲ್ಲಿ ೧೦೦%ರಷ್ಟು ಮುಸ್ಲಿಂ ಹೆಂಗಸರೂ ಅನಕ್ಷರಸ್ಥರಾದರೆ, ಗಂಡಸರಲ್ಲಿ ೯೦%ರಷ್ಟು ಜನರು ಅನಕ್ಷರಸ್ಥರು. ಭೋಟಾನಾಗಪುರದ ಒಂದು ಜಿಲ್ಲೆಯಲ್ಲಿ ತನ್ನ ಹೆಸರನ್ನು ಬರೆಯಲು ಶಕ್ತನಾದ ಒಬ್ಬನೇ ಒಬ್ಬ ಮುಸ್ಲಿಂನೂ ಇರಲಿಲ್ಲ! ಇದು ೧೯೯೮ರಲ್ಲಿ ಭಾರತ ಸರ್ಕಾರ ನಿಯಮಿಸಿದ ಉನ್ನತ ಮಟ್ಟದ ಸಮಿತಿಯು ಉತ್ತರ ಪ್ರದೇಶ, ಬಿಹಾರ, ರಾಜಾಸ್ಥಾನ, ಮಧ್ಯಪ್ರದೇಶ, ಪಶ್ಚಿಮ ಬಂಗಾಳ ಮತ್ತು ಮಹಾರಾಷ್ಟ್ರದಲ್ಲಿ ಕೈಗೊಂಡ ಸರ್ವೇಯ ಫಲಿತಾಂಶ"[೨೮] ಇಂದಿಗೂ ಹಳ್ಳಿಗಳಲ್ಲಿ ಆಧುನಿಕ ವಿದ್ಯಾಭ್ಯಾಸಕ್ಕೆ ಸಮನಾದ ಪ್ರೋತ್ಸಾಹವಿಲ್ಲ. ಬೆಳಗ್ಗೆ ಮತ್ತು ರಾತ್ರಿ ಕೂಡಾ ತಮ್ಮ ಮಕ್ಕಳನ್ನು ಮದರಸಾಗೆ ಕಳುಹಿಸಿ ಧಾರ್ಮಿಕ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡುವ ತಾಯಂದಿರಿಗೆ ಆಧುನಿಕ ವಿದ್ಯಾಭ್ಯಾಸದ ಪ್ರಾಮುಖ್ಯತೆ ತಿಳಿದಿಲ್ಲ. ಹೆಣ್ಣು ಗಂಡುಗಳೆಲ್ಲರೂ ಪ್ರೌಡಶಿಕ್ಷಣದವರೆಗಿನ ಶಿಕ್ಷಣ ಕಡ್ಡಾಯಗೊಳಿಸುವ ಕುರಿತು ಸರ್ಕಾರ ಯೋಜನೆ ರೂಪಿಸಬೇಕಾಗಿದೆ. ಜನಸಂಖ್ಯಾ ಸ್ಫೋಟ ತಡೆಯುವಲ್ಲಿ ಕೂಡಾ ಹೆಣ್ಣು ಮಕ್ಕಳ ಶಿಕ್ಷಣ ಮಹತ್ವದ ಪಾತ್ರ ವಹಿಸುತ್ತದೆ.

ಹೀಗಿರುವಾಗ ಮುಸ್ಲಿಂ ಹೆಣ್ಣುಮಕ್ಕಳ ಅದರಲ್ಲೂ ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿರುವವರ ಬಗ್ಗೆ ವಿದ್ಯಾವಂತ ಮುಸ್ಲಿಂವರು ಜಾಗೃತಿ ಮೂಡಿಸಬೇಕಾಗಿದೆ. ಮುಸ್ಲಿಂ ಮಹಿಳೆಯ ತಮ್ಮ ನೋವನ್ನು ಹಂಚಿಕೊಳ್ಳಲು ಗ್ರಾಮಗಳ ಮಟ್ಟದಲ್ಲಿ ಸಂಘಟನೆಯನ್ನು ಮಾಡಿಕೊಳ್ಳುವುದು ಅವಶ್ಯ

ಎಂಬುದನ್ನು ಕೇರಳ ಈಗಾಗಲೇ ಮನಗಂಡಿದೆ.

**೪.೪. ವಿವಾಹ (ನಿಖಾಹ್) :**

"ಮುಸ್ಲಿಂ ಜನಾಂಗದಲ್ಲಿ ವಿವಾಹಕ್ಕೆ ಅಧಿಕೃತವಾಗಿ ಎರಡು ಶಬ್ಧಗಳಿವೆ. 'ನಿಖಾಹ್' ಮತ್ತು 'ಶಾದಿ', 'ನಿಖಾಹ್' ಶಬ್ದವು ಮೂಲ ಅರಬ್ಬಿ ಭಾಷೆಯದ್ದಾಗಿದೆ. ಇದರ ಅರ್ಥ ಶರೀರ ಸಂಬಂಧ ಅಥವ ಸಂಯೋಗ. 'ಶಾದಿ' ಇದು ಪಾರ್ಸಿ ಬಾಷೆಯಶಬ್ಧ. ಇದರ ಅರ್ಥ ಸಂತೋಷ ಅಥವಾ ಆನಂದೋತ್ಸವ ಎಂದು"[೨೯] ಇವೆರಡು ಪದಗಳು 'ವಿವಾಹ' ಎಂಬ ಅರ್ಥದಲ್ಲಿ ಬಳಕೆಯಾಗುತ್ತಿವೆ. ಇಸ್ಲಾಂ ಧರ್ಮವು ಬ್ರಹ್ಮಚರ್ಯವನ್ನು ಒಪ್ಪವುದಿಲ್ಲ. ಲೌಕಿಕ ಅನುಭವದಿಂದ, ಅಲೌಕಿಕ ಅನುಭವದತ್ತ ಸಾಗುವುದು ಅದರ ಪರಮ ಗುರಿಯಾಗಿದೆ. 'ಪ್ರತಿಯೊಬ್ಬ ಮುಸ್ಲೀಮನು ಮದುವೆ ಮಾಡಿಕೊಂಡು ಸಂಸಾರಿಯಾದರೆ, ಅವನು ಅರ್ಧ ಧರ್ಮವನ್ನು ಸಾಧಿಸಿದಂತೆ' ಎಂಬ ಪ್ರವಾದಿಗಳ ವಾಣಿಯಂತೆ, ಸೂಫಿ ಸಂತರು ಸಹ, ಮದುವೆ ಮಾಡಿಕೊಂಡು ಸಂಸಾರಿಗಳಾಗಿದ್ದನ್ನು ಕಾಣಬಹುದಾಗಿದೆ.

ಈ ಸಂಸ್ಕಾರವು ಧಾರ್ಮಿಕ ಸಂಸ್ಕಾರವಾದರೂ ಸಾಮಾಜಿಕ ದೃಷ್ಠಿಯಲ್ಲಿ ಇದೊಂದು ಸಮಷ್ಠಿ ಸಂಸ್ಕಾರವಾಗಿದೆ. 'ಇಕರಾರ್‌ನಾಮ್(civilconract) ಎಂದರೆ, ವ್ಯಕ್ತಿಗಳ ನಡುವಿನ ಪರಸ್ಪರ ಒಪ್ಪಂದ. ಇದು ಸಮಾಜದ ಪ್ರಮುಖ ವ್ಯಕ್ತಿಗಳ ಸಮಕ್ಷಮದಲ್ಲಿ ನಡೆಯುವ ಕರಾರುವಕ್ಕಾದ ಕಾರ್ಯ. ಈ ಕಾರ್ಯದಲ್ಲಿ ಆ ವ್ಯಕ್ತಿಗಳ ಮುಂದೆ 'ಕುರಾನ್-ಎ-ಶರೀಫ್' ನಲ್ಲಿರುವ ಮಂತ್ರಗಳನ್ನು ಪಠಿಸುವುದು ದೈವಿಸಾಕ್ಷಿಯ ಒಪ್ಪಂದವಾಗಿದೆ.

ಈ ಮಹತ್ವದ ಕಾರ್ಯದಲ್ಲಿ ಪುರುಷನಷ್ಟೇ ಸ್ತ್ರೀಗೂ ಸ್ವಾತಂತ್ರದ ಮತ್ತು ಸಮಾನತೆಯನ್ನು ಇಸ್ಲಾಂ ಧರ್ಮ ನೀಡಿದೆ. ಸಮಾಜದ ಮುಖ್ಯ ವ್ಯಕ್ತಿಗಳ(ಖಾಜಿ) ಸಮಕ್ಷಮದಲ್ಲಿ ಪುರುಷನನ್ನು ಪ್ರಶ್ನಿಸುವಂತೆ, ಸ್ತ್ರೀಯನ್ನು 'ಕುಬೂಲ್‌ಹೈ'(ನಿನಗೆ ಒಪ್ಪಿಗೆಯೇ?) ಎಂದು ಕೇಳಿ, ಪರಸ್ಪರ ಒಪ್ಪಿಗೆಯನ್ನು ತಿಳಿದುಕೊಂಡ ನಂತರ ವಿವಾಹ ಕಾರ್ಯವು ನೆರವೇರುವುದು. ಈ ಕಾರ್ಯದಲ್ಲಿ ಸ್ತ್ರೀಯ ಭವಿತವ್ಯದ ದೃಷ್ಟಿಯಿಂದ, ಅವಳ ಆರ್ಥಿಕ ಸುಭದ್ರತೆಗಾಗಿ ವರನು ವಧುವಿಗೆ ತನ್ನ ಸಾಮರ್ಥ್ಯಕ್ಕೆ ತಕ್ಕಂತೆ ತೆರವು ಅಥವಾ ಅಲ್ಪ ಧನವನ್ನು ನೀಡಬೇಕಾಗುತ್ತದೆ. ಇದಕ್ಕೆ 'ಮಹರ್' ಎಂದು ಕರೆಯುತ್ತಾರೆ. "ಈ ಶಬ್ದಕ್ಕೆ ಪರ್ಯಾಯವಾಗಿ 'ಸದಕ್', 'ನುಹ್‌ಲಾ', 'ಎಕ್' ಎಂಬ ಹೆಸರುಗಳಿವೆ"[೩೦] ಈ ಹಣವು ವ್ಯಕ್ತಿಗತವಾಗಿ ಆ ವಧುವಿಗೆ ಸಂಬಂಧಿಸಿದ್ದು. ಅದರ ಮೇಲಿನ ಎಲ್ಲಾ ಹಕ್ಕುಬಾಧ್ಯತೆಗಳು ಅವಳಿಗೆ ಸೇರಿದ್ದು. ವಿವಾಹ ಕಾರ್ಯವು ಸಾಮಾನ್ಯವಾಗಿ ಹೆಣ್ಣಿನ ಮನೆಯಲ್ಲಿ ಜರುಗುವುದು. ಗಂಡಿನ ಕಡೆಯವರೆಲ್ಲರೂ ಹೆಣ್ಣಿನ ಮನೆಗೆ ಮೆರವಣಿಗೆಯಲ್ಲಿ ಹೋಗುವುದಕ್ಕೆ 'ಬರಾತಿ' ಎಂದು

ಕರೆಯುತ್ತಾರೆ.

ವಿವಾಹ ಸಂದರ್ಭದಲ್ಲಿ ಮೌಲ್ವಿಗಳು 'ಖುತ್ಬಾ-ಎ-ನಿಖಾಹ್' ಎಂದರೆ 'ವಿವಾಹ' ಮಂತ್ರವನ್ನು ಪಠಿಸುತ್ತಾರೆ. ನಂತರ ವಧೂವರರಿಂದ 'ಕುರ್‌ಆನ್-ಎ-ಶರೀಫ್'ನ ಆರು 'ಕಲಮಾ'(ಪವಿತ್ರ ಮಂತ್ರ)ಗಳನ್ನು ಪಠಿಸಲು ಹೇಳುತ್ತಾರೆ. ಈ ಸಂಬಂಧದ ಕುರಿತು 'ಖಾಜಿ'ಗಳು ತಮ್ಮ ಪುಸ್ತಕದಲ್ಲಿ ನೊಂದಣಿ ಮಾಡಿಕೊಳ್ಳುತ್ತಾರೆ. ಇದಕ್ಕೆ 'ದಫ್ತರ್', 'ಸಿಜ್ಜೀಲ್' ಎಂದು ಕರೆಯುತ್ತಾರೆ. ಇದೊಂದು ಕಾನೂನು ಪುಸ್ತಕವೆಂದು ತಿಳಿಯಬಹುದಾಗಿದೆ. ವಿವಾಹ ಸಂಸ್ಕಾರವು ಬಹು ಸರಳ ಸಮಾರಂಭವೆನ್ನಬಹುದಾದರೂ, ಈ ದೇಶದ ಅನುಕರಣೆಯ ಪ್ರಭಾವದಿಂದ ಹಲವಾರು ಹೊಸ ಪದ್ಧತಿಗಳು ಅಂಟಿಕೊಂಡು ಈಗ ಅಬ್ಬರದ ವಾತಾವರಣವನ್ನು ಪಡೆದುಕೊಂಡಿದೆ.

ಪೈಗಂಬರರು ಬ್ರಹ್ಮಚರ್ಯವನ್ನು ನಿರಾಕರಿಸಿ, ಮದುವೆಗೆ ಪ್ರೋತ್ಸಾಹ ನೀಡುವುದರಲ್ಲಿ ಮಹದರ್ಥವಿದೆ. ಲೌಕಿಕದಲ್ಲಿದ್ದು, ಅಲೌಕಿಕದತ್ತ ಸಾಗುವ ಅನುಭವ ಗಮ್ಯವಾದ ಜೀವನ ವಿಧಾನವನ್ನು ಸೂಚಿಸಿದ್ದಾರೆ. ಇಸ್ಲಾಂ ಧರ್ಮದಲ್ಲಿ ಮದುವೆಯೆಂಬುದು ಸಮಾಜ ವ್ಯವಹಾರ ಒಂದು ಒಪ್ಪಂದವಾಗಿದೆ. ಇಲ್ಲಿ ವಯಸ್ಸಿಗೆ ನಿರ್ಬಂಧವಿಲ್ಲದೆ ಮದುವೆ ನಡೆಯಬಹುದಾಗಿದೆ. ವಿಧಿಬದ್ಧವಾದ ವಿವಾಹದ ಜೊತೆಗೆ ದೈಹಿಕ ಸಂಸಾರ ಮತ್ತು ಆರ್ಥಿಕ ಶಕ್ತಿ ಇರುವವರೆಗೆ ಇನ್ನೂ ನಾಲ್ಕು ಮದುವೆ ಮಾಡಿಕೊಳ್ಳಲು ಇಲ್ಲಿ ಅವಕಾಶವಿದೆ. ಒಬ್ಬ ಪುರುಷ ನಾಲ್ವರು ಸ್ತ್ರೀಯರನ್ನು ಮದುವೆಯಾಗುವುದಕ್ಕೆ ಹಿಂದಿನ ಚರಿತ್ರೆಯ ಪ್ರಭಾವವನ್ನು ಕಾಣಬಹುದಾಗಿದೆ.

ಈ ರೀತಿಯ ಮದುವೆಗಳುನಡೆಯುವುದಕ್ಕೆ ಹಲವಾರು ಕಾರಣಗಳೂ ಇವೆ. ಮೊದಲನೆಯ ಪತ್ನಿಯೊಂದಿಗೆ ಜಗಳವಾದಾಗ, ಪರಿವಾರದೊಳಗಿನಿಂದ ಮದುವೆಯಾದ ಪತ್ನಿಯ ಸಂಬಂಧ, ವಿಚ್ಛೇದನ ಸಾಧ್ಯವಿರುವಾಗ, ಮೊದಲನೆಯ ಪತ್ನಿಗೆ ಮಕ್ಕಳಾಗಿದಿದ್ದಾಗ, ಪತ್ನಿಯಾದವಳು ಸದಾ ರೋಗಿಷ್ಠೆಯಾಗಿದ್ದಾಗ, ಎರಡನೆಯ ಮದುವೆಯಾಗಲು ಈ ಧರ್ಮ ಅನುಮತಿ ನೀಡುತ್ತದೆ. ಈ ಕಾರಣಗಳಲ್ಲದೆ ಆ ಪುರುಷನ ಯೋಗ್ಯತೆ ಮತ್ತು ಸಂಸಾರ ನಿಭಾಯಿಸುವ ಧೈರ್ಯ ಮತ್ತು ಸಾಮರ್ಥ್ಯವಿದ್ದರೆ ಒಂದಕ್ಕಿಂತ ಹೆಚ್ಚು ಮದುವೆಗಳನ್ನಾಗಬಹುದು.

ಮುಸ್ಲಿಂ ಜನಾಂಗದಲ್ಲಿ ಸ್ವಗೋತ್ರ ವಿವಾಹಗಳು ಜರುಗುತ್ತವೆ. ಅಣ್ಣ-ತಮ್ಮಂದಿರರ ಮಕ್ಕಳಲ್ಲಿ ಪರಸ್ಪರ ಮಕ್ಕಳಾಗುವುದು ಕಂಡು ಬರುತ್ತದೆ. ಈ ಹಿಂದಿನ ವಾಡಿಕೆಯಂತೆ, ಒಂದು ಮನೆತನದಲ್ಲಿ ಮದುವೆಯ ಸಂಬಂಧವನ್ನು ಬೆಳೆಸುವ ರೂಢಿ ಜಾರಿಯಲ್ಲಿತ್ತು. ಈ ಸಂಬಂಧದಿಂದ ಹುಟ್ಟಿದ ಮಕ್ಕಳು ಶುದ್ಧರಕ್ತದವರು, ಬಲಿಷ್ಟರು ಮತ್ತು ಆರೋಗ್ಯ ದೃಢಕಾಯರು ಎಂಬ ನಂಬಿಕೆಯಿತ್ತು. ಈ ವಿಷಯವಾಗಿ ಎಂಥಹ ನೆಂಟಸ್ಥರಲ್ಲಿ ಮದುವೆಯಾಗಬೇಕು ಎಂಬುದನ್ನು ಪವಿತ್ರ ಗ್ರಂಥ

'ಕುರ್‌ಆನ್'ನಲ್ಲಿ ಹೀಗೆ ಹೇಳಲಾಗಿದೆ.

"ನಿಮಗೆ ನಿಮ್ಮ ತಾಯಂದಿರೊಡನೆ(ವಿವಾಹ) ನಿಷೇದಿಸಲ್ಪಟ್ಟಿರುತ್ತದೆ. ಹಾಗೆಯೇ ನಿಮ್ಮ ಪುತ್ರಿಯರು, ಸಹೋದರಿಯರು, ಸೋದರತ್ತೆಯರು, ತಾಯಿಯ ಸಹೋದರಿಯರು, ಸೋದರ ಪುತ್ರಿಯರು, ಸೋದರಿ ಪುತ್ರಿಯರು, ನಿಮ್ಮ ಪತ್ನಿಯರ ತಾಯಂದಿರು, ನಿಮ್ಮ ಮಡಿಲಲ್ಲಿ ಪೋಷಣೆ ಪಡೆದಿರುವ ನಿಮ್ಮ ಪತ್ನಿಯ ಪುತ್ರಿಯರು, ಯಾವ ಪತ್ನಿಯರೊಂದಿಗೆ ನೀವು ದೈಹಿಕ ಸಂಬಂಧ ಮಾಡಿರುವಿರೋ ಅವರ ಪುತ್ರಿಯರು. ಆದರೆ (ಬರೇ ನಿಕಾಹ್ ಆಗಿದ್ದು) ನೀವು ದೈಹಿಕ ಸಂಬಂಧ ಮಾಡಿರದಿದ್ದರೆ (ಅವರನ್ನು ಬಿಟ್ಟು ಅವರ ಪುತ್ರಿಯರನ್ನು ವಿವಾಹ ಮಾಡಿಕೊಳ್ಳುವುದರಲ್ಲಿ) ದೋಷವಿಲ್ಲ. ನಿಮ್ಮ ಸ್ವಂತಹ ಪುತ್ರರ ಪತ್ನಿಯರೂ ನಿಮಗೆ ನಿಷಿದ್ಧ. ಒಂದು ವಿವಾಹ ಬಂಧನದಲ್ಲಿ ಇಬ್ಬರು ಸಹೋದರಿಯರನ್ನಿರಿಸಿಕೊಳ್ಳುವುದೂ ನಿಷಿದ್ಧವಾಗಿದೆ. ಆದರೆ ಹಿಂದೆ ಆದುದ್ದು ಆಗಿ ಹೋಯಿತು. ನಿಶ್ಚಯವಾಗಿಯೂ ಅಲ್ಲಾಹ ಕ್ಷಮಿಸುವವನೂ ಕೃಪೆ ದೋರುವವನೂ ಆಗಿರುತ್ತಾನೆ. ಇತರರ ವಿವಾಹ ಬಂಧನದಲ್ಲಿರುವ ಸ್ತ್ರೀಯರು(ಮುಹ್ಸನಾತ್) ನಿಮಗೆ ನಿಷಿದ್ಧರಾಗಿರುತ್ತಾರೆ. ಇದು ನಿಮ್ಮ ಮೇಲೆ ಅಲ್ಲಾಹ ನಿರ್ಬಂಧಗೊಳಿಸಿರುವ ಕಾನೂನು"[೩೧] (ಅನ್ನಿಸಾ-೪-೨೩-೨೪) ಪವಿತ್ರ 'ಕುರಾನ್' ಗ್ರಂಥದ ಪ್ರಕಾರ ಇಲ್ಲಿ ಚಿಕ್ಕಪ್ಪ, ದೊಡ್ಡಪ್ಪ, ಚಿಕ್ಕಮ್ಮ, ದೊಡ್ಡಮ್ಮ ಇವರ ಮಕ್ಕಳನ್ನೂ ಮದುವೆಯಾಗುವುದಕ್ಕೆ ನಿಷೇಧವಿಲ್ಲ. ಆದರೆ ಕಾಲಕ್ರಮೇಣ ವೈಜ್ಞಾನಿಕ ಜ್ಞಾನದ ಪ್ರಭಾವದಿಂದಾಗಿ ಇಂತಹ ಮದುವೆಯ ಸಂಬಂದದಿಂದ ಹುಟ್ಟುವ ಮಕ್ಕಳ ಮನಸ್ಸು ಮತ್ತು ಬುದ್ಧಿಯಲ್ಲಿ ಮಾಧ್ಯರಾಗುವವರು, ಎಂಬ ವಿಶೇಷ ಪ್ರಜ್ಞೆ ಬೆಳೆದು ಬಂದು ಇಂತಹ ಸಂಬಂಧಗಳ ನಿಷೇದ ನಡೆದಿರುವುದನ್ನು ಕಾಣಬಹುದಾಗಿದೆ.

ಫಕೀರ್ ಮುಹಮ್ಮದ್ ಕಟ್ಪಾಡಿಯವರ 'ಸರಕುಗಳು' ಕಾದಂಬರಿಯಲ್ಲಿ 'ಮದುವೆ' ಉಳಿದ ಮುಖ್ಯ ಮುಸ್ಲಿಂ ಲೇಖಕರ ಕಾದಂಬರಿಯಲ್ಲಿ ವ್ಯಕ್ತವಾಗುವಂತೆ-ಮದುವೆ ಮುಖ್ಯವಾಗಿ ಶೋಧನೆಗೆ ಒಳಗಾಗಿರುವ ಒಂದು ಸಾಂಸ್ಕೃತಿಕ ಅಂಶ. ವ್ಯಕ್ತಿ ವ್ಯಕ್ತಿಗಳನ್ನು ಕುಟುಂಬ ಕುಟುಂಬಗಳನ್ನು ಹತ್ತಿರಕ್ಕೆ ತರಬೇಕಾದ ಈ ಸಾಮಾಜಿಕ ಸಂಸ್ಥೆ ಒಂದು ದುಃಸ್ವಪ್ನವಾಗಿ ಪರಿಣಮಿಸಿದೆ. ಇದರಿಂದ ತಿಳಿಯುವುದೇನೆಂದರೆ ಆ ಸಮಾಜದ ಮೂಲಭೂತ ಮೌಲ್ಯಗಳಿಗೇ ಏನೋ ರೋಗ ಬಡಿದಿದೆ ಎಂದರ್ಥ. ಇದು ಹಿಂದೂ ಸಮಾಜಕ್ಕೂ ಅನ್ವಯಿಸುವಂಥದ್ದು. ಮುಸ್ಲಿಂ ಸಮಾಜಕ್ಕೂ ಅನ್ವಯಿಸುವಂಥದ್ದು. ಕುಟ್ಟಿಚ್ಚಿರಾದ ಬಡ ಮುಸ್ಲಿಂ ಕುಟುಂಬಗಳ ಸಮಸ್ಯೆಯೆಂದರೆ ಬಡತನದಿಂದ ಕುಟುಂಬ ನಿರ್ವಹಣೆಯ ಕೊರತೆಯಿಂದ ಭಾರತದ ನಿರ್ಗತಿಕ ಹೆಣ್ಣುಮಕ್ಕಳು ಅರಬರನ್ನು ನಿಕಾಹ್ ಮಾಡಿಕೊಳ್ಳುತ್ತಾರೆ. ತಮ್ಮ ದೇಶದಲ್ಲಿ ವಧುದಕ್ಷಿಣೆ(ಮೆಹರ್) ರೂಪದಲ್ಲಿ ಅಪಾರವಾದ

ಹಣ ಕೊಟ್ಟು, ನಿಕಾಹ್ ಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲ. ಅದಕ್ಕಾಗಿ ಇವರು ವ್ಯಾಪಾರದ ಉದ್ದೇಶದಿಂದ ಕಡಲ ತೀರಕ್ಕೆ ಬರುತ್ತಾರೆ. ಬಡ ಮುಗ್ಧ ಹೆಣ್ಣುಗಳನ್ನು ಮದುವೆಯಾಗಿ ಒಂದೆರಡು ತಿಂಗಳು ಸುಖಪಟ್ಟು ನಂತರ ಧರ್ಮವೇ ಕೊಟ್ಟಿರುವ ಹಕ್ಕಿನ ತಲಾಕ್‌ನ್ನು ಕೊಡುತ್ತಾರೆ. ಅಲ್ಪ ಮತ್ತೊದ 'ಮೆಹರ್' ಹಣವನ್ನು ಆ ಬಡವಿ ಕೈಗಿಟ್ಟು ಕಾಲ್ಕೀಳುತ್ತಾರೆ. ಬಡತನ ಅವರ ಮದುವೆಗಳನ್ನು ಅವುಗಳ ಸಹಜ ಸಾಧ್ಯತೆಗಳಿಂದ ತೀರ ದೂರಕ್ಕೆ ಕೊಂಡೊಯ್ದಿರುವುದು.

ಅದೇ ಸಿರಿವಂತ ಸೈದುಕೋಯರ ಮಗಳು ವೈಭವದಿಂದ ಮದುವೆಯಾದ ಜುಬೇದ ತನ್ನ ಗಂಡನಿಗಾಗಿ ಕಾತರದಿಂದ ಕಾಯುತ್ತಿರುವುದು. ದಿನಕ್ಕೊಂದು ಪತ್ರ ಬರೆಯುತ್ತಿರುವುದು, ಪತ್ರ ಓದುವಾಗಲೆಲ್ಲ ಗಲ್ಲ ಕೆಂಪಾಗುವುದು ಇವೆಲ್ಲ ನಫೀಸಾಳಂಥ ಗುಡಿಸಲು ಕೇರಿಯ ಹೆಣ್ಣಿಗೆ ಹೊಸದು ಆ ಸಂದರ್ಭದಲ್ಲಿ ಅವಳು ಹೇಳುವ ಮಾತು ಮನ ಕರಗುವಂತಿದೆ. "ತನ್ನ ಮನೆಯಲ್ಲಿ ಅಕ್ಕಂದಿರು ಯಾರೂ ಗಂಡನ ಪತ್ರದ ಬಗ್ಗೆ ಒಮ್ಮೆ ಕೂಡ ಮಾತಾನಾಡಿದ್ದು ನೆನಪಿಲ್ಲ. ಮದುವೆಯೂ ಅಷ್ಟೇ ಗುಟ್ಟಾಗಿ ಕಣ್ಣು ತೆರೆಯುವಷ್ಟರಲ್ಲಿ ಮುಗಿದಿರುತ್ತದೆ. 'ಮಯಿಲಾಂಜಿ ಪಾಟ್ಟ್' ಹೇಳಿ ಮದುರಂಗಿ ಕೈಗಿಡುವುದಿಲ್ಲ, ಸಿಂಗರಿಸುವುದೂ ಇಲ್ಲ. ಉಟ್ಟ ಉಡುಪಿನಲ್ಲೆ ಎಲ್ಲ ಮುಗಿದು ಹೋಗುತ್ತದೆ"[೩೨] ಎಂದು ನುಡಿಯುತ್ತಾಳೆ. ಆದರೆ ಶ್ರೀಮಂತರ ಮನೆಯಾದ ಸೈದುಕೋಯಾರ ಮದುವೆಯ ಸಂಭ್ರಮವನ್ನು ಕೋಯಾಮ ಹೀಗೆ ಹೇಳುತ್ತಾನೆ. "ಕೂತಿದ್ದ ಹಾಗೆ... ಬಂತು...ಎಂತದಂತಿ? ಎಣಿಸದ್ರೆ ಈಗ್ಲೂ ಮೈಜುಮ್ಮಂತದೆ! ಇಡೀ ಇಡೀ ಕೋಳಿ ಕಾಲಿನ ತೊಡೆ ಎಣ್ಣೆಲೆ ಕರದ್ದದ್ದು. ಬಿರಿಯಾನಿ, ಆಡಿನ ಮಾಂಸದ ಮಸಾಲ, ಮೊಸರು ಹಾಕಿದ ಕಚ್ಚಂಬರಿ, ಹಪ್ಪಳ, ಅಬ್ಬಾ ಒಂದೇ ಎರಡೆ! ತಿಂದದ್ದೇ ತಿಂದದ್ದು ಮಾರಾಯ್ರೆ! ಕುಡೀಲಿಕ್ಕೆಂತ ನೀರಿನ ಗ್ಲಾಸು ಎತ್ತಿದೆ... ಅದು ನೀರಲ್ಲ ಮಾರಾಯ್ರೆ ತಾಜಾ ಲಿಂಬೆಹಣ್ಣಿಂದು ಶರಬತ್ತು!"[೩೩] ಎನ್ನುತ್ತಾ ಕೋಯಾಮು ಬಾಯಿ ಚಪ್ಪರಿಸಿದ. ಆದರೆ ಬಡವರ ಮದುವೆಗಳೆಲ್ಲಾ ಉಟ್ಟ ಉಡುಪಿನಲ್ಲೇ ಹೋಟಲಿನಲ್ಲಿ ಮುಗಿದು ಹೋಗುತ್ತದೆ ಎಂದು ಲೇಖಕರು ಮನ ಮಿಡಿಯುವಂತೆ ಚಿತ್ರಸಿದ್ದಾರೆ.

ಸಮಸ್ಯೆ ಎಷ್ಟು ಸಂಕೀರ್ಣವಾಗಿದೆಯೆಂದರೆ ಅರಬ್ ದೇಶದಲ್ಲಿ ಬಡವರೆನಿಸಿಕೊಂಡವರು ಕುಟ್ಟಿಚ್ಚಿರಾದಲ್ಲಿ ಸಾಕಷ್ಟು ಶ್ರೀಮಂತರೇ ತಮ್ಮ ಮದುವೆಗಾಗಿ ಅರಬ್ ದೇಶಗಳಲ್ಲಿ ಅವರಿಗೆ ಹಣಸಾಲದು. ಆದರೆ ಕುಟ್ಟಿಚ್ಚಿರಾದಲ್ಲಿ ಅವರೇ ಶ್ರೀಮಂತ ಗಂಡುಗಳು ಅವರು ತಮ್ಮ ಪತ್ನಿಯರನ್ನು ಕೊಳ್ಳಬಲ್ಲರು ಮತ್ತು ಕೆಲಕಾಲನಂತರ ಬಿಟ್ಟು ಹೋಗಬಲ್ಲರು. ಸ್ಥಳೀಯ ಗಂಡುಗಳು ತಮ್ಮ ಆರ್ಥಿಕ ಸ್ಥಿತಿಯ ಹಿನ್ನೆಲೆಯಲ್ಲಿ ಈ 'ವಿದೇಶಿ' ಗಂಡುಗಳೊಂದಿಗೆ ಸ್ಪರ್ಧಿಸಲಾರರು. ಇನ್ನೊಂದು ಸಮಸ್ಯೆಯಂದರೆ ಅರಬರೊಡನೆ ವಿವಾಹ ಸಂಪರ್ಕ ಬೆಳೆಸಿರುವ ಈ ಕುಟುಂಬಗಳು ಉಳಿದ

ಪ್ರತಿಷ್ಠಿತ ಮುಸ್ಲಿಂರಿಗಿಂತ ಕೀಳು ಮತ್ತು ಸ್ವಲ್ಪ ಮಟ್ಟಿಗೆ ಅಸ್ಪೃಶ್ಯರೆಂದೇ ಪರಿಗಣಿತವಾದವರು. ಈ ಕುಟುಂಬಗಳ ಹೆಣ್ಣು ಮಕ್ಕಳನ್ನು ಉಳಿದ ಮುಸ್ಲಿಂ ಯುವಕರು ಮದುವೆಯಾಗಲೊಲ್ಲರು. ಹುಸೇನನೊಂದಿಗೆ ತನ್ನ ತಂಗಿಯನ್ನು ಮದುವೆ ಮಾಡಿಕೊಳ್ಳಲು ಹೇಳಿದಾಗ ಹುಸೇನನ ತಾಯಿ ಹೀಗೆ ಹೇಳುತ್ತಾಳೆ. "ನೀನೇನಾ.. ಮಮ್ಮುಟ್ಟಿ ಅಂದ್ರೆ....?" ಅಂತ ಕೇಳಿದ್ದು ಹೌದೆಂದ "ನಿನ್ನ ತಂಗಿಯನ್ನು ನನ್ನ ಮಗ ಹುಸೇನನಿಗೆ ಗಂಟು ಹಾಕಬೇಕೆಂದಿದ್ದೀಯಂತೆ! ನೋಡು, ನಾವು ಹೊಟ್ಟೆಗಿಲ್ಲದಿದ್ದರೂ ಮರ್ಯಾದೆ ಉಳಿಸಿಕೊಂಡೆವು. ನನ್ನ ಮಗನಿಗೆ ಬೇರೆಲ್ಲಿಯೂ ಹೆಣ್ಣು ಸಿಗಲ್ಲಾಂತ ನಿಮ್ಮ ಕೇರಿಯ ಹೆಣ್ಣನ್ನು ಮದುವೆಯಾಗಬೇಕು? ನಿನ್ನ ತಂಗಿಯನ್ನು ಯಾವನಾದ್ರೂ ಅರಬ ಬಂದು ಹಣ ಕೊಟ್ಟು ಕೊಂಡಾನು, ನನ್ನ ಮಗನ ಸುದ್ದಿಗೆ ಬರಬೇಡ"[೩೪] ಎಂದು ಹೇಳಿದಳು ಇಲ್ಲಿ ಕೆಳವರ್ಗದಲ್ಲೇ ಎಷ್ಟೊಂದು ವರ್ಗ ತಾರತಮ್ಯ ವಿರುವುದು ಕಂಡುಬರುತ್ತದೆ. ಹಾಗಾಗಿ ಮತ್ತೆ ಅದೇ ಕೂಪಕ್ಕೆ ಬೀಳುವರು ಮತ್ತು ಅದನ್ನೇ ಜೀವನೋಪಾಯದ ಮಾರ್ಗವನ್ನಾಗಿ ಮಾಡಿಕೊಳ್ಳುವುದು ಈ ಕುಟುಂಬಗಳಿಗೆ ಅನಿವಾರ್ಯ. ಈ ಪರಿಸ್ಥಿತಿ ಬದಲಾಗುವುದು ಹೇಗೆ? ಬೆಕ್ಕಿಗೆ ಗಂಟೆ ಕಟ್ಟುವವರಾರು ಅನ್ನುವ ಸ್ಥಿತಿ.

ಈ ಪರಿಸ್ಥಿತಿ ಕುಟ್ಟಿಚ್ಚಿರಾದ ಮುಸ್ಲಿಂ ಯುವಕ ಸಂಘಕ್ಕೆ ಒಂದು ಸವಾಲನ್ನೇ ಒಡ್ಡುತ್ತದೆ. 'ನಮ್ಮೂರಿನ ಮರ್ಯಾದೆಯೆಲ್ಲಾ ಬೀದಿ ಪಾಲಾಗ್ತಾ ಇದೆ. ಪರ ಊರಿನ ಮುಸ್ಲಿಂರೆಲ್ಲ ನಮ್ಮ ಮುಖಕ್ಕೆ ಉಗುಳ್ತಾರೆ. ನೀವು ಈ ಮುಸ್ಲಿಂ ಯುವಕ ಸಂಘ ಕಟ್ಟಿದ್ದೀರಲ್ಲಾ ಬರೀ ಮೀಟಿಂಗ್ ಮಾಡ್ಲಿಕ್ಕಾ ಇಲ್ಲ ಏನಾದ್ರೂ ಕೆಲಸ ಮಾಡ್ಲಿಕ್ಕಾ? ಎಂದು ಮುತವಲ್ಲಿಯವರು ಕೇಳುತ್ತಾರೆ. 'ಈ ಅರಬೀ ಮುದವೆ ನಿಲ್ಲಿಸುವುದಕ್ಕಾದರೂ ಪ್ರಯತ್ನ ಮಾಡಿ. ಇಷ್ಟು ಮಾಡಿ ಈ ಮದುವೆಗಳಾಗದ ಹಾಗೆ ತಡೆಯಿರಿ. ಇದೊಂದಾದರೂ ಒಳ್ಳೆಯ ಕೆಲಸ ನಿಮ್ಮಿಂದ ಆಗಲಿ' ಎಂಬ ಸೂಚನೆ ಬರುತ್ತದೆ. ಹಲವು ಹತ್ತು ಚರ್ಚೆ ಸಮಾಲೋಚನೆಗಳ ನಂತರ ಒಂದು ದಿನ ಮುಸ್ಲಿಂ ಯುವಕ ಸಂಘದವರು ಘೋಷಣೆ, ಮೆರವಣಿಗೆ, ಪೋಸ್ಟ್‌ರುಗಳ ಮೂಲಕ ತಮ್ಮ ಪ್ರತಿಭಟನೆಯನ್ನು ದಾಖಲು ಮಾಡುತ್ತಾರೆ. ಆದರೆ ಈ ಪ್ರತಿಭಟನೆ ಗುಡಿಸಲು ಜನರ ಮೇಲೆ ತುಂಬಾ ಬೇರೆಯದೇ ಆದ ಪರಿಣಾಮವನ್ನುಂಟು ಮಾಡುವುದು. ಇಡೀ ಸಂದರ್ಭದಲ್ಲಿ ದೊಡ್ಡ ವ್ಯಂಗ್ಯವಾಗಿ ಕಾಣುತ್ತದೆ. ಮೊದಮೊದಲು "ಇದೆಂಥದಪ್ಪ" ಎಂದು ಕೊಂಡಿದ ಗುಡಿಸಲು ಜನಕ್ಕೆ ತಮ್ಮ ಹೊಟ್ಟೆ ಹೊರೆಯುವ ಒಂದೇ ಒಂದು ವೃತ್ತಿಗೆ ಸಂಚಕಾರ ಎಂಬುದು ತಿಳಿಯುತ್ತಲೇ ಗಾಬರಿಯಾದರು. ಅರಬರ ಮದುವೆಯ ದಲ್ಲಾಳಿಗಳು ಯಾರು ಇವರನ್ನು ತಡೆಯಲು ಬರಲಿಲ್ಲ. ಅರಬರು ಹೆದರಿ ನಮಗೆ ನಿಕಾಹ್ ಬೇಡ ಎಂದು ಬಿಟ್ಟರು. ಅವರು ಕಲ್ಲಿಕೋಟೆ ಬಿಟ್ಟು ಬೆಂಗಳೂರು,

ಹೈದರಾಬಾದ್ ಮುಂತಾದ ಪಟ್ಟಣಗಳ ಕಡೆ ಹೋಗಿ ಅಲ್ಲಿನ ಮುಸ್ಲಿಂ ಹೆಣ್ಣುಗಳ ಬೇಟೆಯಲ್ಲಿ ತೊಡಗಿದರು. ಗುಡಿಸಲುಗೇರಿಯ ಜನಕ್ಕೆ ಈ ವರ್ಷ ನಾವು ಬದುಕೋದು ಹ್ಯಾಗೆಂಬ ಚಿಂತೆ ಕಾಡತೊಡಗಿತು. ಚಳುವಳಿ ತೀವ್ರವಾದಂತೆ ತಲೆಯ ಮೇಲೆ ಕೈ ಹೊತ್ತು ಕೂತರು' ಮುಸ್ಲಿಂ ಯುವಕ ಸಂಘದ ಮೇಲುನೋಟಕ್ಕೆ ಪ್ರಗತಿಪರ ಎಂದು ಕಾಣುವ ಚಳುವಳಿಗೆ ಗುಡಿಸಲುಗೇರಿಯ ಹೆಂಗಸರು ಪ್ರತಿಭಟಿಸುವುದು 'ಸರಕುಗಳು' ಕಾದಂಬರಿಯ ಅತ್ಯಂತ ಕುತೂಹಲಕಾರಿ ಭಾಗಗಳಲ್ಲಿ ಒಂದಾಗಿದೆ.

ಯುವಕ ಸಂಘದ ಅಧ್ಯಕ್ಷ ಭಾಷಣದಿಂದ ಕಿಡಿಕಿಡಿಯಾದ ಹಾಜೀಮ ಕೇಳುವ ಪ್ರಶ್ನೆಗಳು ಯುವಕ ಸಂಘವನ್ನು ಕಕ್ಕಾಬಿಕ್ಕಿಯಾಗಿಸುತ್ತದೆ. "ನಾವು ಬೇಕಿದ್ರೆ ನೀವು ಹೇಳಿದ ಹಾಗೆ ಅರಬರನ್ನು ಮದುವೆಯಾಗುವುದು ಬಿಟ್ಟುಬಿಡ್ತೇವೆ. ಆದರೆ ನಮ್ ಹೊಟ್ಟೆ ಹಸೀತದಲ್ಲಾ? ಅದನ್ನು ತಣಿಸೋದಕ್ಕೆ ಯಾವ ದಾರಿಯುಂಟು ಹೇಳಿ? ನಮ್ಮ ಮನೇಲಿ ಹೆಣ್ಣುಮಕ್ಕಳಿದ್ದಾವಲ್ಲಾ, ಅವರನ್ನು ನಿಮ್ಮಂಥ ಮರ್ಯಾದಸ್ತರು ಸೇರ್ಕೊಂಡು ಹಾದರಕ್ಹುಟ್ಟಿದೋರಂತ ದೂರ ಮಾಡ್ತೀರಲ್ಲಾ! ನೋಡೋಣ ನಮ್ಮ ಹೆಣ್ಣುಮಕ್ಕಳನ್ನು ನಿಮ್ಮಲ್ಲಿ ಯಾರಲ್ಲಾ ಮದುವೆಯಾಗ್ಲಿಕ್ಕೆ ತಯಾರಾಗಿದ್ದೀರಿ ಹೇಳಿ? ನಮ್ಮ ಈ ಪ್ರಶ್ನೆಗೆ ಉತ್ತರ ಕೊಡಿ. ಇಲ್ಲವಾದರೆ ಕುಂಡೆಗೊಂದು ಕೈ, ಬಾಯಿಗೊಂದು ಕೈ ಇಟ್ಕೊಂಡು ದೂರ ಹೋಗಿ. ನಮ್ಮ ಸುದ್ಧಿಗೆ ಬರ್ಬೇಡಿ. ನೀವು ಈ ಸಲಾನೂ ನಿಮ್ಮ ಇಷ್ಟ್ರೇಕ್ ಎಲ್ಲಾ ಸುರುಮಾಡಿದ್ರೆ ನಿಮ್ಮ ಮನೆ ಮುಂದೆ ನಾವೆಲ್ಲ ಬಂದು ಉಪವಾಸ ಕೂತು ಸಾಯ್ತೀವಿ"[೩೫] ಇದು ಖಂಡಿತ ಚಳುವಳಿ ಬಿದ್ದುಹೋಗುತ್ತದೆ. ಸ್ವತಃ ಒಬ್ಬ ಪ್ರಗತಿಪರ ಲೇಖಕರಾಗಿ, ಚಲನಶೀಲ ಮುಸ್ಲಿಂ ಬದುಕನ್ನು ಚಿತ್ರಿಸುವಾಗ ಕಟ್ಪಾಡಿ ಎಲ್ಲಿಯೂ ತಮ್ಮ ಸಮತೋಲನವನ್ನು ಕಳೆದುಕೊಳ್ಳುವುದಿಲ್ಲ. ಲೇಖಕರು ಗುಡಿಸಲು ಗೇರಿಯ ಹೆಣ್ಣುಮಕ್ಕಳ ಸಮಸ್ಯೆಯನ್ನು ಕೇವಲ ಒಂದು ಸಾಮಾಜಿಕ ಸಮಸ್ಯೆಯಾಗಿ ಮಂಡಿಸದೆ ಕುಟ್ಟಚ್ಚಿರಾದ ಸಮಗ್ರ ಜೀವನದ ವಿನ್ಯಾಸದಲ್ಲಿ ಹಣೆಯುವುದರಿಂದ ಕಾದಂಬರಿ ಇನ್ನಷ್ಟು ದಟ್ಟವಾಗುತ್ತದೆ.

ಇಲ್ಲಿನ ಹಲವು ಬಗೆಯ ಮಾನವೀಯ ಮತ್ತು ಆರ್ಥಿಕ ಸಂಬಂಧಗಳು, ಮಾನಸಿಕ ಮತ್ತು ಭೌತಿಕ ಜಂಜಾಟಗಳು, ಜೀವನ ನಿರ್ವಹಣೆಯ ಹಲವು ಶೈಲಿಗಳು ಒಂದು ಬದುಕಿನ ವಿನ್ಯಾಸವನ್ನು ಮೂರ್ತಗೊಳಿಸುತ್ತವೆ. ಹಾಜೀಮ, ಮುಸ್ಲಿಂ ಯುವಕ ಸಂಘರ್ಷ ಒಂದು ದೃಷ್ಟಿಯಿಂದ ಪರಸ್ಪರ ವಿರೋಧವನು ಮೇಲುನೋಟಕ್ಕೆ ದಾಖಲಿಸಿದರೂ ಮುಸ್ಲಿಂ ಬದುಕಿನ ಒಟ್ಟಾರೆ ಆಶೋತ್ತರಗಳ ಹಿನ್ನೆಲೆಯಲ್ಲಿ ಜತೆಜತೆಯಾಗಿಯೇ ಹೆಣೆದುಕೊಳ್ಳುತ್ತವೆ. ಸಲೀಮ, ನಫೀಸಳ, ಅಣ್ಣ ಮಮ್ಮುಟ್ಟಿ ಹೀಗೆ ವಿವಿಧ ಮಾನಸಿಕ ಸ್ತರಗಳ ಹಲವು ಪಾತ್ರಗಳಿಗೆ ತಮ್ಮ

ಜೀವನದ ಸಂದರ್ಭದ ಗಾಢವಾದ ಅರಿವಿದೆ. ಈ ಅರಿವೇ ಕುಟ್ಟಿಚ್ಚಿರಾ ಜೀವನದ ಚಲನೆಗೆ ಕಾರಣವಾಗಿದೆ. ಯಥಾಸ್ಥಿತಿವಾದದ ನಿಸ್ಸಹಾಯಕ ಮುಂದುವರಿಕೆ ಯಾರಿಗೂ ಇಷ್ಟವಿಲ್ಲ. ಆರ್ಥಿಕ ಬದಲಾವಣೆಗಳೊಂದಿಗೆ ವೈಚಾರಿಕವಾಗಿ ದಿಟ್ಟ ಕ್ರಿಯೆಗಳು ಮಾತ್ರ ಬದಲಾವಣೆಗೆ ದಾರಿಮಾಡಿಕೊಡಬಲ್ಲವು ಎಂಬುದು ಕಾದಂಬರಿಯ ಒಟ್ಟು ದರ್ಶನವಾಗಿದೆ.

**೪.೫. ಸಂಪ್ರದಾಯಗಳು :**

ಆಚರಣೆ ಮತ್ತು ನಂಬಿಕೆಗಳ ಮೊತ್ತವನ್ನು ಸಂಪ್ರದಾಯವೆಂದು ಹೇಳಲಾಗುತ್ತದೆ. ಹಿಂದಿನ ಕಾಲದಿಂದ ನಮ್ಮವರೆಗೆ ಆಸ್ತಿಯಾಗಿ ಉಳಿದು ಬಂದಿರುವ ಸಂಸ್ಥೆ, ನಡವಳಿಕೆಗಳೇ ಸಂಪ್ರದಾಯ. ಒಳ್ಳೆಯದಾದರೆ ಸತ್‌ಸಂಪ್ರದಾಯ, ಕೆಟ್ಟದಾದರೆ ದುಸ್ಸಂಪ್ರದಾಯ. ಇದು ಒಂದು ಪ್ರವಾಹವಿದ್ದಂತೆ. ಜನತೆಯ ಬದುಕು ಹೇಗೆ ಆರಂಭವಾಯಿತೊ ಏನೊ ತನ್ನ ಚರಿತ್ರೆಯಲ್ಲಿ ಅದು ಮಾರ್ಪಾಡಾಗತೊಡಗಿತು. ಮಾರ್ಪಾಡು ನಡೆದು ಅಳಿದು ಅಳಿಯುತ್ತದೆ; ಉಳಿದುದು ಉಳಿಯುತ್ತದೆ. ಎಷ್ಟೋ ಆಸೆ-ಆಕಾಂಕ್ಷೆ ಕಲ್ಪನೆಗಳಾಗಿಯೇ ಉಳಿದಿರಬಹುದು; ಘಟನೆಗಳಾಗಲಿಲ್ಲ, ಕೇಲವನ್ನು ಜನ ಒಪ್ಪಿಕೊಳ್ಳುತ್ತದೆ; ಕೆಲವನ್ನು ಮೆಚ್ಚದು, ಕೆಲವನ್ನು ಕಂಡರೆ ಪಕ್ಷಪಾತ ಹೆಮ್ಮೆ; ಇನ್ನು ಕೆಲವನ್ನು ಕಂಡರೆ ಅಸಹನೆ, ಅಪ್ರೀತಿ, ದ್ವೇಷ, ಓಕರಿಕೆ; ಅವನ್ನು ಬಹಿಷ್ಕರಿಸುತ್ತದೆ. ಯಾವುದನ್ನು ಜನ ನಡೆಸಿಕೊಂಡು ಬರತ್ತದೆಯೊ ಊರ್ಜಿತಗೊಳಿಸಲು ಬಯಸುತ್ತದೆಯೊ ಅದನ್ನು ಕಾಪಾಡಿಕೊಳ್ಳಲು ಇಚ್ಛಿಸುತ್ತದೆ. ಯಾವುದು ಮಾದರಿಯಾಗತಕ್ಕುದೆಂದು ಎಣಿಸುವುದೂ ಅದು ಸಂಪ್ರದಾಯವಾಗುತ್ತದೆ. ಅದು ಶಿಷ್ಟಾಚಾರ ಗುಣದಲ್ಲಿ ಸಿದ್ಧಿ ಪಡೆದದ್ದು ಆ ಕಾಲದ ನಡತೆಯಾಗಿ ನೀತಿಯಾಗಿ ಬಹುಜನರ ಪ್ರೀತಿಗೆ ಎಡೆಕೊಡುತ್ತದೆ. ಹಾಗೆ ನಡೆವುದು ಮಾರ್ಗ, ಸೂಕ್ತ, ಸಭ್ಯ, ಅದು ಚೆನ್ನು, ಸಭೆಗಳಲ್ಲಿ, ವಿದ್ಯಾಶಾಲೆಗಳಲ್ಲಿ ಅದಕ್ಕೆ ಗೌರವ, ಆ ಮನೆಯ ಮಕ್ಕಳು ಮರಿಗೆ ಅದನ್ನು ಕಲಿಸುತ್ತಾರೆ. ಆ ಮಟ್ಟಕ್ಕೂ, ನಯಕ್ಕೂ ಸರ್ವದಾ ತೂಗಬೇಕೆಂದು ಜನ ಉಪದೇಶ ಮಾಡುತ್ತಾರೆ. ಒಳ್ಳೆಯದೊ ಕೆಟ್ಟದೊ ಮನೆಯಲ್ಲಿ ಆದಾಗ ಹೀಗೆ ಹೀಗೆ ಆದರೆ ಮಾತ್ರ ಸರಿ. ಹಾಗಾದರೆ ಅಲ್ಲ ಎಂಬ ವಿವೇಚನೆ, ನಿಯಮ, ನಿರ್ದೇಶನ ಬೆಳೆಯುತ್ತವೆ. ಇವೆಲ್ಲ ಸಂಪ್ರದಾಯವೇ. ಒಟ್ಟಿನಲ್ಲಿ ಜನವರ್ಗ ಯಾವುದನ್ನು ಗ್ರಾಹ್ಯ, ಗ್ರಾಹ್ಯವಲ್ಲದ್ದು, ಯಾವುದನ್ನು ಉಳಿಸಿ ಬೆಳಸಬೇಕು, ಯಾವುದು ತ್ಯಾಜ್ಯ ಎಂಬ ವಿಧಿ(ಮಾಡತಕ್ಕದು) ನಿಷಿದ್ಧ(ಮಾಡತಕ್ಕುದಲ್ಲ) ಎನ್ನುತ್ತದೆಯೊ ಅದರ ಏರ್ಪಾಡಿಗೆ ತನ್ನನ್ನು ಒಳಪಡಿಸಿಕೊಳ್ಳುತ್ತದೆ. ಇದಕ್ಕೆ ಸಂಬಂಧಿಸಿದಂತೆ ಸಂಸ್ಥೆ, ರೂಢಿ, ಆಚಾರ, ಶಿಸ್ತು, ಏರ್ಪಡುವುದು ಸಹಜ. ಅವನ್ನು ಕಾಪಾಡಲು ಒಂದು ಕಡೆ ಮೆಚ್ಚುಗೆ, ಗ್ರಾಹ್ಯಭಾವನೆ, ಇನ್ನೊಂದು ಕಡೆ ಶಿಕ್ಷೆ, ವರ್ಜ್ಯ ನೀತಿ ಎಂಬುವು ಹುಟ್ಟುತ್ತವೆ. ಅವುಗಳ ರಕ್ಷಣೆ, ಪೋಷಣೆ

ಪ್ರಚಾರಗಳಿಗೆ ಸಂಸ್ಥೆ, ಅಧಿಕಾರ ವರ್ಗ ಹುಟ್ಟುತ್ತವೆ. ಜೀವಂತವಾದ ಎಲ್ಲ ಜನತೆಗಳಲ್ಲಿಯೂ ಹಾಗೆಯೇ ಇದೊಂದು ಹರಡಿದ ಪ್ರಪಂಚ; ಆಯಾ ಜನತೆ ಹುಟ್ಟಿ ಬೆಳೆದಂತೆ ಅದು ಬೆಳೆದಂತೆ ರೂಪಗೊಳ್ಳುತ್ತಿರುತ್ತದೆ. ಪ್ರತಿಯೊಂದು ಸಂಪ್ರದಾಯಕ್ಕೂ ಒಂದು ಚೌಕಟ್ಟು, ರೂಪರೇಖೆ, ಆದರ್ಶ, ಸ್ವರೂಪ ಲಕ್ಷಣ, ಗುಣದೋಷ ವಿವೇಚನೆ, ರೀತಿ–ನೀತಿಗಳ ಕಟ್ಟುಪಾಡು, ಮೆಚ್ಚುಗೆ ತೆಗಳಿಕೆಗಳ ಆವರಣ, ಶಿಕ್ಷೆ, ರಕ್ಷೆಗಳ ಮಂಡಲ ಒಲಿಯುತ್ತದೆ. ಸರಿ ಸರಿಯೇಕೆ, ತಪ್ಪು ತಪ್ಪೇಕೆ? ನಿರ್ಣಾಯಕಾಂಶಗಳು ಯಾವುವು? ಎಂಬುದೂ ಆ ಕಟ್ಟಿನಲ್ಲಿ ನಿಲ್ಲುತ್ತದೆ. ಹೀಗೆ ಜೀವನ ಚರಿತ್ರ ಇವು ಸಂಪ್ರದಾಯದ ಪರಸ್ಪರ ರೂಪಕಾಂಗಗಳು.

ಮುಸ್ಲಿಂರ ಜೀವನದಲ್ಲಿ ಅನೇಕ ಬಗೆಯ ಸಂಪ್ರದಾಯಗಳುಂಟು, ಅವು ಪಂಗಡ ಮತ್ತು ಪ್ರಾದೇಶಿಕತೆಗೆ ಹೊಂದಿಕೊಂಡಂತೆ ವೈವಿಧ್ಯಮಯವಾಗಿವೆ. ಮುಸ್ಲಿಂ ಹೆಣ್ಣಿನ ಬಗ್ಗೆ ಇರುವ ನಂಬಿಕೆಗಳು ಆಕೆಯನ್ನು ಆಚರಣೆಯಲ್ಲಿ ತೊಡಗುವಂತೆ ಪ್ರೋತ್ಸಾಹಿಸುತ್ತವೆ. ಫಕೀರ ಮುಹಮ್ಮದ್ ಕಟ್ಪಾಡಿಯವರ ಕಾದಂಬರಿಗಳಲ್ಲಿ ಸಮಾಜ ಸಂಪ್ರದಾಯಗಳನ್ನು ಎದುರಿಸುವುದನ್ನು ನೋಡಬಹುದು.

ಕುಟ್ಟಿಚ್ಚಿರಾ ವಿಶಿಷ್ಟ ಕುಟುಂಬ ಪದ್ಧತಿಯು ಒಂದು ಬಗೆಯ ಪಿತೃ ಪ್ರಧಾನ ಅಧಿಕಾರವುಳ್ಳ ಮಾತೃ ಪ್ರಧಾನ ಸಂಸ್ಕೃತಿಯ ಬದುಕು ಇಲ್ಲಿಯದು. ಇಲ್ಲಿ 'ಕೊಟ್ಟಗಂಡು ಕುಲಕ್ಕೆ ಹೊರಗೆ' ಆದರೆ ದುಡಿಮೆ–ನಿರ್ವಹಣೆ ಎಲ್ಲದರ ಜವಾಬ್ದಾರಿ ಮಾತ್ರ ಆತನದು. ಅವನ ಮದುವೆಯಾದ ಮೇಲೆ ಆ ಕುಟುಂಬದ ಹೊಣೆಗಾರಿಕೆಯಲ್ಲಾ ಆ ಮನೆಯ ಹೆಣ್ಣು ಮಕ್ಕಳದು. ಇದೇ ರೀತಿ ಈ ಪದ್ಧತಿಯು "ನಾಯರ್ ತರವಾಡು(ಮನೆತನ)ಗಳಂತ ಇಲ್ಲಿಯೂ ಮುಸ್ಲಿಂ ಪುರುಷರು ಹೆಂಡತಿಯ ಮನೆಯಲ್ಲಿರಬೇಕೇ ಹೊರತು ಹೆಂಡತಿ ಗಂಡನ ಮನೆಗೆ ಅತಿಥಿಯಾಗಿ ಎಂದಾದರೊಮ್ಮೆ ಬೇಟಿಕೊಡುವುದಷ್ಟೇ ಪದ್ಧತಿಯಾಗಿದೆ"[೩೬](ಸಂಪ್ರದಾಯವಾಗಿದೆ) ಈ ರೀತಿ ಇಂತಹ ಹಲವು ಕೂಡುಕೊಳ್ಳುವಿಕೆ ಧಾರ್ಮಿಕ ಸಾಮರಸ್ಯಕ್ಕೆ ಕಾರಣವಾಗಿದೆ ಎನ್ನಬಹುದು.

ಕೇರಳದಲ್ಲಿ ಕೋಯಾ ಮೆನತನದ ಪ್ರಕಾರ ಮದುವೆಯಾದ ಹೆಣ್ಣು ಮಕ್ಕಳಿಗೆ ಸಂಪ್ರದಾಯದಂತೆ ಮಗಳಾದವಳಿಗೆ ಕೋಣೆಯನ್ನು, ಸುಸ್ಥಿತಿಯಲ್ಲಿದ್ದರೆ ಮನೆಯನ್ನೋ ಕಟ್ಟಿಸಿಕೊಡಬೇಕಾದದು ಕೋಯಾ ಮನೆತನದ ಸಂಪ್ರದಾಯ. ಮದುವೆಯಾದ ತಮ್ಮ ಹೆಣ್ಣುಮಕ್ಕಳು ತಾಯಿಯ ಮನೆಯಲ್ಲಿಯೇ ಇರಬೇಕಾದದ್ದು ಕೋಯಾ ಮನೆತನದ ಪದ್ಧತಿ ಗಂಡು ದಿನವೂ ಬಂದು ಹೋಗಬೇಕು. ಸಂಪ್ರದಾಯಕ್ಕೆ ಸರಿಯಾಗಿ ಸಂಜೆ ಮನೆಗೆ ಬಂದು, ಬೆಳಗ್ಗೆ ನಸುಕಿನಲ್ಲಿ ಎದ್ದು ಮಿಂದು ಅವರಿಗಾಗಿ ತಯಾರಿಸಿದ ವಿಶೇಷ ತಿಂಡಿಗಳು ನಾಷ್ಟಾ ಮುಗಿಸಿ ತಮ್ಮ ಕೆಲಸಕ್ಕೋ ಮನೆಗೋ ಹೊರಡುತ್ತಾರೆ. ಇದು ತಲೆತಲಾಂತರದಿಂದ ಬಂದ ಸಂಪ್ರದಾಯ.

ಈ ಅನಿಷ್ಟ ಸಂಪ್ರದಾಯದಿಂದ ಮಮ್ಮುಟ್ಟಿಗೆ ತನ್ನ ಮಕ್ಕಳ ಜೊತೆ ಪ್ರೀತಿಯಿಂದ ಕಳೆಯುವ ಸಮಯವು ದೂರ... ಅದಕ್ಕೆ ಮಮ್ಮುಟಿ ತುಂಬಾ ನೊಂದುಕೊಳ್ಳುತ್ತಿದ್ದ. ಹಿಂದೊಮ್ಮೆ ಮಮ್ಮುಟಿ ರಾತ್ರಿ ಬರುವಾಗ ಮಕ್ಕಳಿಗೆ ಬಿಸ್ಕತ್ತು ಆಟದ ಸಾಮಾನುಗಳನ್ನು ತಂದಿದ್ದನು. ಆದರೆ ಮಕ್ಕಳು ಮಲಗಿದ್ದರು. ಮಗುವನ್ನು ಎಬ್ಬಿಸುವ ಪ್ರಯತ್ನ ಮಾಡಿದ್ದ. ಆದರೆ ಅವು ಏಳಲಿಲ್ಲ. ಮಮ್ಮುಟಿ ಬಹಳ ನೊಂದುಕೊಂಡನು. ಅವನು ನಸುಕಿನಲ್ಲಿ ಮನೆಯಿಂದ ಹೊರಡುವಾಗಲೂ ಮಕ್ಕಳು ಮಲಗಿಯೇ ಇರುತ್ತಿದ್ದವು. ಅವು ಏಳುವ ತನಕ ಕಾದರೆ ಹೊತ್ತು ಮೂಡುತ್ತದೆ. ಅಷ್ಟು ಹೊತ್ತು ನಿಂತರೆ ಈ ಮನೆತನದ ಸಂಪ್ರದಾಯವಾದಿಗಳ ತಮಾಷೆಗೆ ಕೊಂಕು ನುಡಿಗಳಿಗೆ ಬಲಿಯಾಗಬೇಕಾಗುತ್ತದೆ ಎಂದು ತಿಳಿದು ಮಕ್ಕಳನ್ನು ಮುದಿಸುವ, ಆಡಿಸುವ ತನ್ನ ಆಸೆಯನ್ನು ಹತ್ತಿಕ್ಕಿಕೊಂಡು ಸಂಪ್ರದಾಯವನ್ನು ಒಳಗೊಳಗೆ ದ್ವೇಷಿಸುತ್ತಾ ಸಿಟ್ಟಿನಿಂದಲೇ ಹೊರಡುತ್ತಿದ್ದನು. ಈ ಸಂಪ್ರದಾಯಗಳು ಮಮ್ಮುಟ್ಟಿಗೆ ಒಬ್ಬನಿಗೆ ಮಾತ್ರವಲ್ಲ ಕೋಯಾ ತರವಾಡಿನಲ್ಲಿ ಹುಟ್ಟಿದ ಪ್ರತಿಯೊಬ್ಬನು ಈ ಸಮಸ್ಯೆ ಅನುಭವಿಸುತ್ತಿದ್ದನು. ಈ ಅನಿಷ್ಟ ಸಂಪ್ರದಾಯಗಳಿಂದ ಮಕ್ಕಳನ್ನು ಮುದ್ದಿಸುವ ಅವುಗಳ ಜೊತೆ ಸ್ವಲ್ಪ ಹೊತ್ತು ಕಾಲಕಳೆಯುವುದೇ ಸಾಧ್ಯವಾಗುತ್ತಿರಲಿಲ್ಲ. ಆ ಮಕ್ಕಳಿಗೆ ತಮ್ಮ ಅಪ್ಪನ ಬಗ್ಗೆ ಪರಿಚಯವೇ ಸಾಧ್ಯವಾಗದಿರುವುದು ಕಂಡುಬರುತ್ತದೆ.

ಈ ಸಂಪ್ರದಾಯದ ಬಗ್ಗೆ ಮಮ್ಮುಟಿಯಂತಹ ಬಡಕುಟುಂಬದವರು ವಿರೋಧಿಸುತ್ತಾರೆ. ತನ್ನ ಪತ್ನಿಯಾದ ಹಾಲಿಮಾಬೀಯು ಅತೀಯಾಗಿ ಸಂಪ್ರದಾಯ ಶರಣಳಾಗಿರೋದು ಮಮ್ಮುಟ್ಟಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಹಲಿಮಾಬೀಯು ತನ್ನ ಮನೆತನದ ಬಗ್ಗೆ ಮಾತನ್ನಾಡುವಾಗ ಮಮ್ಮುಟ್ಟಿ ರೇಗುತ್ತಿದ್ದ. ಈ ಅನಿಷ್ಟ ಸಂಪ್ರದಾಯವನ್ನು ತೀವ್ರವಾಗಿ ವಿರೋಧಿಸುತ್ತಿದ್ದನು. "ಈ ದರಿದ್ರ ಸಂಪ್ರದಾಯಕ್ಕೂ ಸೂಳೆ ಮನೆಗೆ ಹೋಗಿ ನಸುಕಿನಲ್ಲಿ ಓಡಿ ಬರುವ ವಿಟನಿಗೂ ಏನು ವ್ಯತ್ಯಾಸವಿದೇ ಹೇಳು?"[೩೭] ಎಂದು ತನ್ನ ಹೆಂಡತಿಯನ್ನು ರೇಗಿಸುತ್ತಿದ್ದನು.

ಮಮ್ಮುಟಿ ಕೂಡ ಕೋಯಾ ಮನೆತನಕ್ಕೆ ಸೇರಿದವನು. ಆದರೆ ಅವನು ಹಾಗೆ ಹೇಳುವಲ್ಲಿ ಕಾರಣವಿತ್ತು. ಅವನು ಹುಟ್ಟಿದ ಗುಡಿಸಲು ಕೇರಿಯ ಜನ ಈ ತರದ ಸಂಪ್ರದಾಯಗಳನ್ನು ಎಂದೋ ಮುರಿದುಬಿಟ್ಟಿದರು. ಈ ಸಂಪ್ರದಾಯಗಳು ಹೊಟ್ಟೆ ತುಂಬಿಸುವುದಿಲ್ಲ ಎನ್ನುವುದು ಅವರು ಕಂಡುಕೊಂಡಿದ್ದರು. ಅಜೀಜ್‌ನು ಕೂಡ ಈ ಸಂಪ್ರದಾಯವನ್ನು ವಿರೋಧಿಸುವುದು ಕಂಡುಬರುತ್ತದೆ. ಅಜೀಜ್ ಮದುವೆಯಾದ ಹೊಸತರಲ್ಲಿ ತನ್ನ ತಾಯಿಯೊಂದಿಗೆ "ನಂಗೆ ಹೆಂಡ್ತಿ ಮನೆಗೆ ಹೋಗಿ ಇರೋದು ಇಷ್ಟವಿಲ್ಲಮ್ಮಾ.... ಇದೆಲ್ಲಾ ಎಂಥ ಸುಡುಗಾಡು ಸಂಪ್ರದಾಯ? ನಾನು ಬೇರೆ ಮನೆ ಮಾಡ್ತೇನೆ..."[೩೮] ಎಂದಾಗ ಅವನ ತಾಯಿ ಮನೆಯೆಲ್ಲಾ ಗಲಾಟೆ

ಮಾಡಿದಳು. "ಅದೇನು ಸ್ವಲ್ಪ ಓದಿದಾವ್ನೊಂತ ಪೊಗರಾ ನಿಂಗೆ? ನೀನು ಹುಟ್ಟಿದು ಕೋಯಾ ತರವಾಡಿನಲ್ಲಿ... ಅಸಲೀ ಮುಸ್ಲಿಂ ಕುಟುಂಬದಲ್ಲಿ ಕಾಫೀರರ ಮನೆಯಲಲ್ಲ. ಕೋಯಾ ಮನೆತನದಲ್ಲಿ ಹುಟ್ಟಿದ ನಂತರ ಈ ಮನೆತನದ ರಿವಾಜಿನಂತೆ, ರೀತಿಯಂತೆ ನಡೆದುಕೊಳ್ಳಬೇಕು. ನಾವೆಲ್ಲ ಅದೇ ರಿವಾಜಿನ ಪ್ರಕಾರ ನಡೆದು ಬದುಕಿಲ್ವಾ? ನಿಂಗೇನು ಧಾಡಿ? ಅಂತ ದಬಾಯಿಸಿದಳು. ಅವನ ತಂದೆ ಕೂಡ ನೀನು ನಮ್ಮ ಮನೆತನದ ಮರ್ಯಾದೆ ಹಾಳು ಮಾಡಬೇಡಪ್ಪಾ ಎಂದನು. ಅವರ ಮಾತು ಕೇಳಿ ಅವನಿಗೆ ಸಹಿಸದಾಯಿತು. ಮದುವೆಯಾದ ವರ್ಷದೊಳಗೆ ಬಾಡಿಗೆ ಮನೆಮಾಡಿ ಬೇರೆಯಾದನು. ಹೀಗೆ ಆಧುನಿಕ ವಿದ್ಯಾಭ್ಯಾಸ ಪ್ರಭಾವದಿಂದ ಸಮಾಜದಲ್ಲಿರುವ ಅನಿಷ್ಟ ಸಂಪ್ರದಾಯಗಳು ಬದಲಾವಣೆಯಾಗುತ್ತಿರುವುದು ಕಂಡುಬರುತ್ತದೆ.

ಮುಸ್ಲಿಂನಾದವನು ಪರಸ್ಪರ ಒಬ್ಬರೊನ್ನೊಬ್ಬರು ಬೇಟಿಯಾದಾಗ ಸಂಪ್ರದಾಯದಂತೆ "ಅಸ್ಸಲಾಂ ಆಲೈಕುಂ" ಎಂದರೆ ಇನ್ನೊಬ್ಬ ವ್ಯಕ್ತಿ "ವ ಅಲೈಕುಂ ಸಲಾಂ" ಎನ್ನುವುದು ಕಂಡುಬರುತ್ತದೆ. ಮತ್ತು ಮುಸ್ಲಿಂನಾದವನು ದಿನಕ್ಕೆ ಐದು ಸಾರಿ ನಮಾಜು ಮಾಡಬೇಕು. ಬಡವರಿಗೆ ಇದು ಸಾಧ್ಯವಾಗುತ್ತಿಲ್ಲ. ಇಸ್ಲಾಂ ಸಂಪ್ರದಾಯದಂತೆ ವಿವಾಹವೆಂಬುದು ಪವಿತ್ರವಾದ ಬಂಧನವಲ್ಲ ಅದು ಓರ್ವ ಸ್ತ್ರೀ ಮತ್ತು ಪುರುಷನ ನಡುವಿನ ಕಾಂಟ್ರಾಕ್ಟ್; ಒಂದು ಒಪ್ಪಂದ. ಇಷ್ಟವಿದ್ದಷ್ಟು ಕಾಲ ಜೊತೆಗಿದ್ದು ಬೇಡವಾದಾಗ ಬೇರೆಯಾಗುವ ಸೌಲಭ್ಯ ಈ ವಿವಾಹ ಕ್ರಮದಲ್ಲಿದೆ. ಬ್ಯಾರಿಗಳ ಮದುವೆ ಸಮಾರಂಭವು ಹಿಂದಿನ ಕಾಲದಲ್ಲಿ ಎರಡು ವಾರಗಳ ತನಕ ನಡೆಯುತ್ತಿದ್ದವು. ಮದುವೆ ಸಮಾರಂಭಗಳಲ್ಲಿ ಕುಟುಂಬದ ಎಲ್ಲ ಸದಸ್ಯರು ಬಹಳ ಸಂಭ್ರಮದಿಂದ ತಮ್ಮನ್ನು ತಾವೇ ತೊಡಗಿಸಿಕೊಳ್ಳುತ್ತಿದ್ದರು. ಒಂದು ವಾರದ ಮೊದಲೇ ಸಂಸಾರ ಸಮೇತರಾಗಿ ಮದುವೆ ಮನೆಯಲ್ಲಿ ತಂಗಿರುತ್ತಿದ್ದರು. ಮದುವೆ ಹಿಂದಿನ ದಿನ ಮೆಹಂದಿ ಇಡುವಾಗ ಊರಿನ ಹಿರಿಯ ಮಹಿಳೆಯರೆಲ್ಲಾ ಸೇರಿ ಮೊಯಿಲಾಂಜಿ ಪ್ಪಾಟ್ ಮದರಂಗಿ ಇಡುವಾಗ ಹಾಡುತ್ತಿದ್ದ ಹಾಡು ಜನಪ್ರಿಯತೆ ಅದರ ಸಾಲುಗಳಲ್ಲೇ ವ್ಯಕ್ತವಾಗುತ್ತದೆ.

"ನಾಲವುತ್ತೆ ನಡ್‌ಮುತ್ತತ್ತ್ ನಟ್ಟ್‌ಬನ್ನೆ ಮೊಯಿಲಾಂಜಿ
ಬರುಕೂಸು ತನ್ನಿ ಬೀತಿ ಮುಂಗೈ ಬನ್ನೆ ಮೊಯಿಲಾಂಜಿ
ಜಂಡ್‌ಕೂಸು ತನ್ನಿ ಬೀತಿ ಮುಂಗೈ ಪೋಟ್ಯೆ ಮೊಯಿಲಾಂಜಿ
ಮೂನ್ ಕೂಸು ತನ್ನಿ ಬೀತಿ ಮುಂಗೈ ಬನ್ನೆ ಮೊಯಿಲಾಂಜಿ"[೩೯]

ಮದುವೆ ಮುಂಚಿನ ದಿನ ಮದುಮಗಳಿಗೆ ಮದರಂಗಿ ಇಡುವ ಕಾರ್ಯಕ್ರಮ ಈ ಹಾಡಿನಿಂದ ಇನ್ನಷ್ಟು ರಂಗಾಗುತ್ತಿತ್ತು. ಆದರೆ ಈಗ ಸಂಬಂಧಿಕರನ್ನು ಹೆಸರಿಗೆ ಮಾತ್ರ ಕರೆದು ಮಾಯಿಲಾಂಜಿ ಹಾಡುಗಳು, ನಗು-ನಲಿವು, ಎಲ್ಲವೂ ಕಾಣದಾಗಿದೆ.

ಬ್ಯಾರಿ ಹೆಣ್ಣುಮಕ್ಕಳು ಬಳಸುತ್ತಿದ್ದ ಆಭರಣಗಳ ವಿನ್ಯಾಸವಂತೂ ಅದ್ಭುತ. ಕೊಪ್ಪು, ಸರಪೂಲ, ವಾಲೆ, ಬಲಿ, ಬಾಲೀಕ್, ತಲೆಸಿಂಗಾರ, ಬಂದಿ, ಗೆಜೆತಿಕ್ ಮಾಲೆ, ಪದಕಲ, ಚಾನೊಲ್ವೆ ಮಾಲೆ, ನೆಂಜೆ ಮಾಲೆ, ಪತ್ತೂಲುಮಾಲೆ, ಮನ್ನಿ ಮಾಲೆ, ಮಿಸಿರಿಡೆ ಮಾಲೆ, ಗೆಜ್ಜೆ ಪಿಂಬಲೆ, ತರಿಬಲೆ, ಕೈಕಲ ಮುಂತಾದವುಗಳು ಕಾಣದಾಗಿ ಹೊಸ ವಿನ್ಯಾಸದ ಆಭರಣಗಳು ಬಂಗಾರದ ಅಂಗಡಿಯಲ್ಲಿ ಪಡೆದುಕೊಳ್ಳವಂತಾಗಿದೆ. ಬ್ಯಾರಿಗಳ ಸಾಂಪ್ರದಾಯಿಕ ತಿಂಡಿಗಳಾದ ತನ್ನಿಪಿಂಡೆ, ಕಲ್ತಪ್ಪ, ಇರ್‌ಮನೆಡಪ್ಪ, ನೇವರಿ, ಚಕ್ಕೆಕುರಂಡೆ ಪೂಡಿಕರಿ, ಪೂತಿಯಟ್ಟಿರೆ, ಚಟ್ನಿ, ಸುಟ್ಟು ತನ್ನುತದ ಚಕ್ಕೆಕುರು ಇತ್ತೀಚಿನ ದಿನಗಳಲ್ಲಿ ಮಾಯವಾಗಿವೆ. ಹುಕ್ಕು ಸೇದುವ ಅಭ್ಯಾಸ, ಹೊಟ್ಟೆ ನೋವಾದರೆ ಹೊಕ್ಕಳಿಗೆ ತೆಂಗಿನ ಎಣ್ಣೆ ಹಾಕುವುದು ಕಿವಿ ಸೋರಿದರೆ ಕಿವಿಗೆ ತೆಂಗಿನ ಎಣ್ಣೆ ಹೊಯ್ಯುವುದು ಮನೆಮದ್ದು. ಮೂರುದಾರಿಯ ಕಲ್ಲುಗಳನ್ನು ತಂದು ಸ್ವಲ್ಪ ಮೆಣಸು, ಉಪ್ಪು ಮತ್ತು ಕರಿಯನ್ನು ಸೇರಿಸಿ ಬಟ್ಟೆಯಲ್ಲಿ ಕಟ್ಟಿ ಹೊಟ್ಟೆಗೆ ನೀವಿ ಅದಕ್ಕೆ ತುಫ್ ಎಂದು ಉಗುಳಿ ಬೆಂಕಿಯಲ್ಲಿ ಹಾಕಿದರೆ ಚಟಚಟ ಸದ್ದು, ಕೆಲವೇ ನಿಮಿಷದಲ್ಲಿ ಹೊಟ್ಟೆ ನೋವು ಮಾಯ. ಈ ರೀತಿಯ ಕೆಲವು ಸಾಂಪ್ರದಾಯಿಕ ಅಂಶಗಳ ಹಿಂದೆ ಬ್ಯಾರಿಗಳ ಮೂಢನಂಬಿಕೆಗಳು ಕೆಲಸ ಮಾಡುತ್ತಿದ್ದವು.

ಬ್ಯಾರಿ ಸಮುದಾಯದ ಸಾಂಪ್ರದಾಯಿಕ ಕಸುಬುಗಳೆಂದರೆ ಜಿನಸು, ವ್ಯಾಪಾರ, ಮೀನು ಶೇಖರಣೆ, ಕೃಷಿ ಉತ್ಪನ್ನಗಳನ್ನು ಖರೀದಿಸಿ ಮಾರುವುದು. ಮರದ ವ್ಯಾಪಾರ, ಹಣ್ಣು ಹಂಪಲು ಮತ್ತು ಗುಜರಿ ವ್ಯಾಪಾರ, ಮರದ ಮಿಲ್ಲುಗಳು, ಹಂಚಿನ ವ್ಯಾಪಾರ, ಬೀಡಿಕಟ್ಟುವುದು, ಅದರ ಗುತ್ತಿಗೆ, ಬೀಡಿ ತಯಾರಿಸಿ ಸ್ಥಳೀಯ ಮಾರಾಟ, ಕೈಗಾರಿಕೆಗಳ ಸ್ಥಾಪನೆ, ಇತ್ತೀಚೆಗೆ ಸಾಮಾಜಿಕ ಬದಲಾವಣೆಯಾಗಿದೆ. ಬ್ಯಾರಿ ಸಮುದಯಾ ಹಲವಾರು ಶಿಕ್ಷಣ ಸಂಸ್ಥೆಗಳನ್ನು ಆಸ್ಪತ್ರೆಗಳನ್ನು ಸಂಘಗಳನ್ನು ತೆರೆದಿದ್ದಾರೆ.

ಬ್ಯಾರಿ ಸಮುದಾಯ ಆಚರಿಸುವ ಹಬ್ಬಗಳು ಮೊಹರ್ರಮ್, ಮೀಲಾದುನ್ನಬಿ, ಶಬೆಬರಾತ್, ಈದುಲ್‌ಫಿತ್ರ್, ಈದುಲ್ ಅಝ್‌ಹಾ, ಬ್ಯಾರಿ ಹಬ್ಬಗಳಲ್ಲಿ ವ್ಯಕ್ತಿ ಪೂಜೆಯ ಲವಲೇಶವೂ ಕಾಣುವುದಿಲ್ಲ. ಬ್ಯಾರಿ ಜನಸಾಂದ್ರತೆ ಹೆಚ್ಚಿರುವ ಪ್ರದೇಶಗಳಲ್ಲಿ ದರ್ಗಾಗಳು ಇರುವುದು, ಪರ್ಷಿಯಾ, ಅರೇಬಿಯಾ ಮುಂತಾದದೇಶಗಳಿಂದ ಬಂದ ಸೂಫಿ ಸಂತರು, ಜನಸಾಮಾನ್ಯರ ಮನಸ್ಸು ಗೆದ್ದು, ಸುಖದುಃಖಗಳಲ್ಲಿ ಭಾಗಿಯಾಗಿ ಹುತಾತ್ಮರಾದ ನಂತರ ದೇವರು ಅವನನ್ನು ಉನ್ನತ ಹಂತದಲ್ಲಿ ತಂದು ನಿಲ್ಲಿಸಿ 'ಉರುಸ್' ಆಚರಿಸಲಾಗುತ್ತದೆ.

'ಮೆಹರ್' ಎಂಬುದು ಪುರುಷನು ವಿವಾಹದ ಪ್ರಥಮ ದಿನ. ವಧುವಿಗೆ ನೀಡಬೇಕಾದ ಉಡುಗೊರೆ, ವಿಚ್ಛೇದನದ ಬಳಿಕ ನೀಡಬೇಕಾದ ಜೀವನಾಂಶಕ್ಕೂ 'ಮೆಹರ್'ಗೂ ಯಾವುದೇ

ಸಂಬಂಧವೂ ಇರುವುದಿಲ್ಲ. ತಲಾಕ್ ಮುಸ್ಲಿಂರ ಒಂದು ಕೆಟ್ಟ ಸಂಪ್ರದಾಯ ಇದ್ದಾಗಿದೆ. ಇದ್ದರಿಂದ ಅನೇಕ ಮಹಿಳೆಯರು ನೋವಿನ ಸೆಲೆಯಲ್ಲಿ ಬದುಕುವಂತಾಗಿದೆ. ಅದೇ ರೀತಿ 'ಇದ್ದತ್' ಇದು ಗಂಡ ಸತ್ತ ನಂತರ ಹೆಂಡತಿಯಾದವಳು ಮುಸ್ಲಿಂ ಸಂಪ್ರದಾಯದಂತೆ, ದೇವ ನಿಯಮಕ್ಕನುಗುಣವಾಗಿ ಪತಿ ತೀರಿಕೊಂಡ ನಂತರ ನಾಲ್ಕು ತಿಂಗಳು ಹತ್ತು ದಿನಗಳವರೆಗೆ 'ಇದ್ದತ್' ಆಚರಿಸಬೇಕು. ಈ ಆಚರಣೆ ಪತಿಯಿಂದ ತಲ್ಲಾಖಿತಳಾದ ಪತ್ನಿಗೂ ಇದ್ದು, ಅವಳು 'ಇದ್ದತ್' ಆಚರಿಸಬೇಕು ಎಂಬುದು ನಿಯಮ. ಗರ್ಭಿಣಿ ಆಗಿದ ಪಕ್ಷದಲ್ಲಿ ಮಗುವನ್ನು ಹೆತ್ತು ಹಾಲೂಡಿಸುವ ಅವಧಿಯನ್ನು 'ಇದ್ದತ್' ಅವಧಿಯೆಂದು ಪರಿಗಣಿಸಲಾಗುತ್ತದೆ.

"ನಿಮ್ಮಲ್ಲಿಯಾವನಾದರೂ ಪತ್ನಿಯನ್ನು ಬಿಟ್ಟು ತೀರಿಕೊಂಡರೆ ನಾಲ್ಕು ತಿಂಗಳು ಹತ್ತುದಿವಸ ತಡೆದು ನಿಲ್ಲಲಿ. ಹಾಗೆ 'ಇದ್ದತ್'ನ ಕಾಲಾವಧಿ ಮುಗಿಸಿದ ನಂತರ ವಿವಾಹ ಮಾಡಿಕೊಂಡರೆ(ವಾಡಿಕೆಯಂತೆ ನಡೆದರೆ) ನಿಮ್ಮ ಮೇಲೆ ಯಾವುದೇ ಆಕ್ಷೇಪವೂ ಇಲ್ಲ. ನೀವು ಮಾಡುತ್ತಿರುವುದುರ ಬಗ್ಗೆ ಅಲ್ಲಾಹು ಸೂಕ್ಷ್ಮವಾಗಿ ತಿಳಿಯುವವನೇ ಆಗಿರುತ್ತಾನೆ"[೬೦](ಕುರಾನ್, ಅಲ್‌ಬಕರ್, ಪುಟ-೨೩೪)

'ಕಚ್ಚಾದ' ಕಾದಂಬರಿಯಲ್ಲಿ ಸೂಫೀ ಬ್ಯಾರಿಯು ಮದುವೆಯಾದ ಹೊಸದರಲ್ಲಿ ಹೆಂಡತಿ ಕಚ್ಚಾದಳಿಗೆ ಬಾಡಿ, ಲಂಗ ತಂದು ಕೊಟ್ಟಿದ್ದಕ್ಕಾಗಿ ಅವಳ ಅತ್ತೆ ಕೆಂಡಾಮಂಡಲಳಾಗಿ ಕೂಗಾಡಿದಳು. "ನಿನ್ನ ಹೆಂಡ್ತಿಯನ್ನು ಬೆಳ್ಳೆಕಾರರ ಲೇಡಿ ಮಾಡುತ್ತೀಯೇನೋ ನನ್ನ ಮಗನೆ...? ಈ ಲಂಗ, ಬಾಡೀಸ್, ಹಾಕ್ಲಿಕ್ಕೆ ಶುರುಮಾಡಿ ಜಹನ್ನುಂ ಅನ್ನೋ ನರಕಕ್ಕೆ ದಾಖಲು ಮಾಡ್ತಿಯಾ? ನನ್ನ ಮನೆತನದ ಹುಡುಗೀರೆಲ್ಲ ಇವಳ್ಳ ಹಾಗೆ ವೇಷ ಕಟ್ಟೋದಕ್ಕೆ ಸುರು ಮಾಡಿದ್ರೆ ಅವುನ್ನು ಮದ್ವೆ ಆಗೋದಕ್ಕೆ ಯಾರು ಬಂದಾರೋ..."[೬೧] ಎಂದು ತನ್ನ ಸಂಪ್ರದಾಯದ ಬಗ್ಗೆ ಹೇಳುತ್ತಿದ್ದಳು ಹೆಣ್ಣು ಬುರ್ಖಾ ಹಾಕದೇ ಹೊರಗಡೆ ಬರುವಂತಿಲ್ಲ.

"ಈ ಹುಡುಗಿಗೆ ಏನಾಗಿದೆ? ಹಾಡು ಹಗಲಿನಲ್ಲಿ ಯಾವ ರೀತಿ ಘೋಷವೂ ಇಲ್ಲದೇ ಗೇಟಿನ ಬಳಿ ಹೋಗಿ ನಿಂತಿದ್ದಾಳಲ್ಲ? ಅಲ್ಲಿ ಬೀದಿಯಲ್ಲಿ ಎಷ್ಟು ಜನ ಗಂಡಸರು ಅತ್ತಿತ್ತ ಓಡಾಡುತ್ತಿದ್ದಾರೆ? ಏನು ತಲೆ ಕೆಟ್ಟಿದೆಯೇ? ಅವಳ ತಂದೆ ಇದನ್ನು ನೋಡಿದರೆ ಎಲುಬು ಪುಡಿ ಮಾಡದೇ ಬಿಡುವರೆ? ಮದುವೆಯಾದ ಮುಸ್ಲಿಂ ಹುಡುಗಿ ಘೋಷಾ ಇಲ್ಲದೇ ಬೀದಿಯ ಬದೀ ನಿಲ್ಲುವುದೇ? ನಿನ್ನ ಅತ್ತೆಗೇನಾದರೂ ಇದು ಗೊತ್ತಾದರೆ? ತಾಯಿಯಾದ ನಿನಗೆ ತಿಳಿಯಬೇಡವೆ? ನೀನೆಂತಹ ತಾಯಿ? ಇಷ್ಟು ದೊಡ್ಡ ಮುಸ್ಲಿಂ ಹುಡುಗಿ ಬುರ್ಖಾ ಕೂಡ ಇಲ್ಲದೆ ಈ ರೀತಿ ಬೀದಿಯಲ್ಲಿ ಓಡಾಡುವುದೇ?"[೬೨] ಎಂದು ಸಮೀರ ತಂದೆ ತಾಯಿಗೆ

ಹೇಳುತ್ತಾನೆ. ತಾಯಿಯೇ ಹೆಣ್ಣು ಮಕ್ಕಳಿಗೆ ಇಸ್ಲಾಂನ ಎಲ್ಲಾ ಪದ್ಧತಿಗಳನ್ನು ಹೇಳಿ ಪಾಲಿಸುವಂತೆ ಮಾಡುವುದು, ಹದ್ದುಬಸ್ತಿನಲ್ಲಿಡುವುದು ಮಾಡಬೇಕೆಂದು ಗಂಡಸು ಬಯಸುತ್ತಾನೆ.

ಹೆಣ್ಣುಮಕ್ಕಳು ಸಿನಿಮಾ ನೋಡುವುದರಿಂದ, ಬುರ್ಖಾ ಹಾಕದಿರುವುದರಿಂದ ಹಾಳಾಗುತ್ತಾರೆಂದು ತಾವು ಬಹಳ ಸಂಪ್ರದಾಯಸ್ಥರು. ಉನ್ನತ ಕುಲೀನ ಮನೆತನದವರು ಎಂದು ಹೇಳಿಕೊಳ್ಳುತ್ತಾರೆ. ಹೈದರಬಾದಿನ ಟೆನ್ನಿಸ್ ಆಟಗಾರ್ತಿ ಸಾನಿಯಾ ಮಿರ್ಜಾ ಚಿಕ್ಕ ಉಡುಪು ತೊಟ್ಟು ಆಡುವುದಕ್ಕೆ ವಿರುದ್ಧವಾಗಿ ಜಮಾತಿನಿಂದ 'ಫತ್ವಾ' ಹೊರಡಿಸಲಾಯಿತು.

ಹೀಗೆ ಮುಸ್ಲಿಂ ಸಮಾಜದಲ್ಲಿ ಸಂಪ್ರದಾಯಗಳು ಅವಳ ಉಡುಗೆಯ ಮೇಲೆ ನಡುಗೆಯ ಮೇಲೆ, ಜೀವನದ ಪದ್ಧತಿಯ ಮೇಲೆ ಅನೇಕ ಸಂಪ್ರದಾಯಗಳೆಂಬ ಸಂಕೋಲೆಗಳನ್ನು ಹೇರಿ ಅವಳನ್ನು ಸಂಪ್ರದಾಯದ ಬಂಧನದಲ್ಲಿಡಲಾಗಿದೆ ಎಂದು ಹೇಳಬಹುದು.

**೪.೬. ಧರ್ಮ :**

"ಧರ್ಮವೆಂದರೆ ಮಾತಲ್ಲ, ಸಿದ್ಧಾಂತವಲ್ಲ, ಶಾಸ್ತ್ರವೂ ಅಲ್ಲ, ಅದು ಸಾಕ್ಷಾತ್ಕಾರ. ಅಂದರೆ ಅದು ಕಲಿಯುವುದಲ್ಲ, ಪಡೆಯುವುದು. ಅಂದರೆ ಸಾಕ್ಷಾತ್ಕಾರ ಮಾಡಿಕೊಳ್ಳುವುದು. ಧರ್ಮವು ಅತೀಂದ್ರಿಯ ಅನುಭವ. ಪ್ರಪಂಚದಲ್ಲಿರುವ ಎಲ್ಲರಲ್ಲಿಯೂ ಇಂದ್ರಿಯಾತೀತವಾಗಿರುವ ಶಕ್ತಿ ಸುಪ್ತವಾಗಿದೆ. ಒಂದು ಸಣ್ಣ ಕೀಟವಾದರೂ ಒಂದಿಲ್ಲ ಒಂದು ದಿನ ಇಂದ್ರಿಯ ಬೇಲಿಯನ್ನು ದಾಟಿ ದೇವರನ್ನು ಸೇರುವುದು."[೪೩] ಧರ್ಮವೆನ್ನುವುದು ದೈವದ ಮೂರ್ತಸ್ವರೂಪ, ಮಾನವನ ಜೀವನವನ್ನು ನೈತಿಕತೆಯತ್ತ ಎಳೆದೊಯ್ಯುವ ಶಕ್ತಿ. ಅಂದರೆ ಅಸತ್ಯದಿಂದ ಸತ್ಯದೆಡೆಗೆ, ಅನ್ಯಾಯದಿಂದ ನ್ಯಾಯದೆಡೆಗೆ, ಕತ್ತಲೆಯಿಂದ ಬೆಳಕಿನೆಡೆಗೆ ಕರೆದೊಯ್ಯುವ ದಿವ್ಯಶಕ್ತಿಯು ಧರ್ಮಕ್ಕಿದೆ. ಧರ್ಮವು ನಮ್ಮ ಸಾಮಾಜಿಕ ಜೀವನದ ಅವಿಭಾಜ್ಯ ಶಕ್ತಿಯಾಗಿ ಅದರ ಎಲ್ಲಾ ಅಂಗಗಳನ್ನು ಓತಪ್ರೋತವಾಗಿ ವ್ಯಾಪಿಸಿದೆ.

ಧರ್ಮವು ಮಾನವ ಜೀವನದ ಕೇಂದ್ರ ಶಕ್ತಿಯಾಗಿ ನಿಂತಿದೆ. ಧರ್ಮವೆಂಬ ಪದವು ಬಹು ವ್ಯಾಪಕವಾದ, ವಿಶಾಲವಾದ ಅರ್ಥವನ್ನು ಪಡೆದಿದೆ. ಈ ಪದವು 'ದೃ' ಎಂಬ ಧಾತುವಿನಿಂದ ಉತ್ಪತ್ತಿಯಾಗಿದ್ದು, ಅದು ಎತ್ತಿ ಹಿಡಿ, ನಿಲ್ಲುವಂತೆ ಮಾಡು, ಪೋಷಿಸು, ಸಂರಕ್ಷಿಸು ಎಂಬ ಅರ್ಥಗಳನ್ನು ಹೊಂದಿದೆ. 'ಧೀಯತೇ ಇತಿಧರ್ಮ:, ಎಂದು ಅವರ ಲಕ್ಷಣಗಳನ್ನು ಸೂತ್ರೀಕರಿಸುತ್ತಾರೆ.

ಧರ್ಮದ ಕುರಿತು ಪ್ರವಾದಿಗಳು, ತತ್ತ್ವಜ್ಞಾನಿಗಳು, ಋಷಿಮುನಿಗಳು, ತಮ್ಮದೆಯಾದ ಅಭಿಪ್ರಾಯಗಳಿಂದ ವ್ಯಾಖ್ಯಾನಿಸಿದ್ದಾರೆ. ಸಮಾಜವನ್ನು ಎತ್ತಿಹಿಡಿದು, ಜನಮನವನ್ನು ತಿದ್ದಿ, ಅಧಃಪತನದಿಂದ ಪಾರುಮಾಡಿ ಉನ್ನತ ಸ್ಥಿತಿಗೆ ಕರೆದೊಯ್ಯುವುದು ನಿಜಧರ್ಮ ಎಂಬುದು

ಅವರೆಲ್ಲರ ಮತವಾಗಿದೆ. "ಧರ್ಮವೆಂಬುದು ಹೃದಯ ಪ್ರಕಾಶ, ಅಂತರಂಗದ ಜ್ಯೋತಿ, ಸತ್ಯವನ್ನು ನುಡಿಯುವುದು, ಸಹನಶೀಲರಾಗುವುದು, ಪರರಿಗೆ ಉಪಕಾರ ಮಾಡುವುದು ಇದು ಧರ್ಮದಲ್ಲಿದೆ ಎಂದು ಪೈಗಂಬರರು ನುಡಿಯುತ್ತಾರೆ"[೪೪]

"ಇಹದಲ್ಲಿ ಮತ್ತು ಪರದಲ್ಲಿ ಸುಖಪ್ರಾಪ್ತಿಗಾಗಿ ಮನಷ್ಯನನ್ನು ಪ್ರೇರೆಪಿಸುವಂತದ್ದು ಧರ್ಮ"[೪೫] ಎಂದು ಸ್ವಾಮಿ ವಿವೇಕಾನಂದರ ಅಭಿಪ್ರಾಯವಾಗಿದೆ. "ಮಾನವನು ಯಾವುದನ್ನು ಪವಿತ್ರ ಭಾವನೆಯಿಂದ ನೋಡುವನೋ ಅದರೋಡನೆ ಇಟ್ಟುಕೊಳ್ಳುವ ಸಂಬಂಧವೇ ಧರ್ಮ"[೪೬] ಎಂಬುದು ನಂಜೇಗೌಡರ ಅಭಿಮತವಾಗಿದೆ.

"ಜಗತ್ತಿನ ಸ್ಥಿತಿಗತಿಗಳ ದೃಷ್ಟಿಯಿಂದ ದೃಢವಾಗಿ ಹಿಡಿಯಬೇಕಾದುದು, ನಿಷ್ಠೆಯಿಂದ ಪಾಲಿಸಬೇಕಾದುದು, ವಾಡಿಕೆಯಾಗಿ ಬಂದ ಮತ ಸಂಬಂಧವಾದ ಅನುಷ್ಠಾನ, ಕಟ್ಟಳೆ, ವಿಧಿ, ಆಚಾರ, ಸಂಪ್ರದಾಯ, ವಿಹಿತವಾದ ಆಚರಣೆ ಧರ್ಮ"[೪೭] "ಧರ್ಮವೆಂದರೆ ಮನುಷ್ಯನು ಇಹಪರ ದೃಷ್ಟಿಯಿಂದ ಸುಖಕ್ಕಾಗಿ ಮಾಡಬೇಕಾದ ಕೆಲಸಗಳು"[೪೮] "ನಿಜವಾದ ಧರ್ಮ ನಮ್ಮ ಶೀಲದ ಪ್ರತಿ ವಿಭಾಗದ ಮೇಲೆ ತನ್ನ ಮುದ್ರೆಯನ್ನು ಒತ್ತದೆ ಬಿಡದು. ಅದು ಜೀವಂತ ವೃಕ್ಷದ ದೂರದ ಟೊಂಗೆಯಲ್ಲೂ, ಹರಿಯುವ ರಸದಂತೆ" ಎಂದು 'ಪೆನ್ನ' ಎಂಬ ಆಂಗ್ಲ ಲೇಖಕನು ಹೇಳುತಾನೆ.[೪೯] "ನಿಜವಾದ ಧರ್ಮ ಹಾಗೂ ಸದ್ಗುಣ ಮನಕ್ಕೆ ಸುಖ ಶಾಂತಿಯನ್ನು ದಯಪಾಲಿಸುವವು, ಎಲ್ಲಾ ಬಗೆಯ ಆನಂದ, ಸುಖ ದೊರೆಯುವಂತೆ ಮಾಡುವವು ಅಲ್ಲದೆ ನಮ್ಮ ಜೀವನವನ್ನು ಉನ್ನತಿಯ ಶಿಖರಕ್ಕೆಮುಟ್ಟಿಸುವವು"[೫೦] ಎಂದು 'ಎಡಿಸನ್'ನು ಹೇಳುತ್ತಾನೆ. "ನಿಜವಾದ ಧರ್ಮ ಸಮಾಜದ ಅಡಿಗಲ್ಲು ಅದರ ಮೇಲಯೇ ನಾಗರಿಕತೆಯ ಸರಕಾರ ನಿಂತಿದೆ. ಇದೇ ಶಕ್ತಿಯ ಬಲ, ಮಸೂದೆಗಳ ಸತ್ವ; ಮತ್ತು ಅವೆರಡರ ಸಮನ್ವಯ. ಅಲಕ್ಷದಿಂದ ಅದನ್ನು ಹೊಯ್ದಾಡುವಂತೆ ಮಾಡಿದರೆ ಸಂಪೂರ್ಣ ರಚನೆ, ಸಮಾಜದ ಸ್ಥಿರವಾಗಿ ಶಾಶ್ವತವಾಗಿ ಬಾಳದು"[೫೧] ಎಂದು 'ಬುರ್ಕೆ' ಹೇಳುತ್ತಾನೆ. "ಧರ್ಮವಿಲ್ಲದ ವಿಜ್ಞಾನ ಕರುಡು, ವಿಜ್ಞಾನವಿಲ್ಲದ ಧರ್ಮ ಕುಂಟ" ಎಂದು ಐನ್‌ಸ್ಟೀನನ ಮಾತನ್ನು ಗಮನಿಸಬೇಕು. "ಅಂತರಂಗ ಬಹಿರಂಗಗಳೆರಡರ ಸಮನ್ವಯ ಮತ್ತು ಸಾಮರಸ್ಯಗಳಿಂದ ಇಂದಿನ ಜೀವನ ಸುಗಮವಾಗಬೇಕೆಂಬ ಆಶೆಯವು ಈ ಮಹಾ ವಿಜ್ಞಾನಿಯ ಮಾತುಗಳಲ್ಲಿ ಅಡಗಿದೆ"[೫೨] ಈ ರೀತಿ ಧರ್ಮದ ಕುರಿತು ಹೇಳಿರುವ ವ್ಯಾಖ್ಯಾನಗಳು ಮಾನವನ ಬದುಕನ್ನು ಹಸನುಗೊಳಿಸುವ ನಿತ್ಯ ಸತ್ಯಗಳ ಮಾರ್ಗದಲ್ಲಿ ನಡೆಸುವ ಮಹಾನ್ ತತ್ತ್ವಗಳಾಗಿ ನಿಂತಿವೆ. ಮಾನವೀಯತೆಯ ಸಾಕಾರ ತತ್ತ್ವಧರ್ಮ. ವಿಶ್ವದಲ್ಲಿ ನೆಲೆಸಿರುವ ಸರ್ವದರ್ಮಗಳ ಮೂಲ ಗುರಿ ಪ್ರೀತಿ, ದಯೆ, ಕರುಣೆ, ಅನುಕಂಪ, ಸಹಕಾರದಂತಹ ಹಲವಾರು ಮಾನವೀಯ ಮೌಲ್ಯಗಳನ್ನು ಬಿತ್ತರಿಸುವ ಗಟ್ಟಿನೆಲೆ ಧರ್ಮವಾಗಿದೆ.

ಜಡವಾದ ಸಮಾಜವನ್ನು ಚೇತನದತ್ತ ಕರೆದೊಯ್ಯುವುದು ಅಜ್ಞಾನ, ಅಂಧಕಾರ, ಅನಕ್ಷರತೆಯ ಬೀಡಿನಲ್ಲಿದ್ದು, ಕಾಡಿನ ಜೀವನ ಸಾಗಿಸುವ ಜನತೆಯನ್ನು ನಾಡಿನ ಜನತೆಯನ್ನಾಗಿಸಲು ಆತ್ಮಜ್ಞಾನವನ್ನು ಅರುಹಿದರು. ದ್ವೇಷ, ಅಸೂಯೆ, ಮತ್ಸರಗಳಿಂದ ಆವೃತವಾದ ದುಷ್ಟಮನವನ್ನು, ಸಂಘರ್ಷದ ಮಾರ್ಗದಲ್ಲಿ ಸಾಗುತ್ತಿರುವ ಜನತೆಯನ್ನು ಬದುಕಿನ ಸತ್ಯವನ್ನು ತಿಳಿಸಲು ಪ್ರಯತ್ನಿಸಿದರು. 'ಮನುಜ ಮತ ವಿಶ್ವಪಥ'ವೆಂದು ಮಾನವ ಧರ್ಮವನ್ನು ತಿಳುಹಿದರು. ಅಂತೆಯೆ ಬೌದ್ಧ ಧರ್ಮವನ್ನು ಬುದ್ಧನು, ಜೈನ ಧರ್ಮವನ್ನು ಮಹಾವೀರನು, ಕ್ರೈಸ್ತಧರ್ಮವನ್ನು ಏಸು ಕ್ರಿಸ್ತನು, ಇಸ್ಲಾಂ ಧರ್ಮವನ್ನು ಹಜರತ್ ಮಹಮ್ಮದ್(ಸೂ.ಅ)ಪೈಗಂಬರರು ಜಾಡ್ಯ ಕಟ್ಟಿದ ತತ್ತ್ವಗಳಿಗೆ ಹೊಸ ಬೆಳಕನ್ನು ನೀಡಿ ಇಸ್ಲಾಂ ಧರ್ಮವನ್ನು ಪ್ರಚುರಪಡಿಸಿದರು.

ನಾಡಿನ ಜನತೆಯ ಮತಾಭಿಪ್ರಾಯಗಳು ಭಿನ್ನವಾದ ನೈತಿಕ ವಿಚಾರಗಳು, ಆಧ್ಯಾತ್ಮಿಕ ಚಿಂತನೆಗಳಿಂದ ಒಂದು ಸಮಾಜ ಮತ್ತು ಆ ಸಮಾಜದ ಪ್ರಭಾವಿಗಳಿಂದ ಹಲವಾರು ಧರ್ಮಗಳು ಸ್ಥಾಪಿತಗೊಂಡಿವೆ. ಹೀಗಾಗಿ ಧರ್ಮದ ಮೂಲ ಮತ್ತು ಉಗಮವನ್ನು ಹೇಳುವುದು ಕಷ್ಟಸಾಧ್ಯ ಎಂದು ಹೇಳಬಹುದು. ಮೂಲವನ್ನು ಹುಡುಕುವ ಪ್ರಯತ್ನ ಸಾಹಸವೇ ಸರಿ. ಶತಮಾನಗಳು ಹಲವಾರು ತಲೆಮಾರುಗಳು ಕಳೆದು ಹೋದ ಪ್ರಾಚೀನತಮ ಧರ್ಮಗಳ ಬಗೆಗೆ ಉಪಲಬ್ಧವಾಗಿರುವ ಆಧಾರಗಳ ಮೇಲೆ ಗುರುತಿಸಬೇಕಾಗುತ್ತದೆ.

ಮಾನವ ಕಲ್ಯಾಣಕ್ಕಾಗಿ ಜನಿಸಿದ ಧರ್ಮಗಳೆಲ್ಲ ಜನಾಂಗಿಯ ಅಥವಾ ಮಹಾನ್ ವ್ಯಕ್ತಿಯ ಹೆಸರಿನಿಂಧ ಧರ್ಮಗಳಿಗೆ ನಾಮನಿರ್ದೇಶನದಿಂದ ಗುರುತಿಸುತ್ತಾ ಬಂದಿರುವುದು ಸರ್ವೆಸಾಮಾನ್ಯ. ಆದರೆ ಇಸ್ಲಾಂ ಧರ್ಮವು ಯಾವುದೇ ಜನಾಂಗದ ವ್ಯಕ್ತಿಗಳ ನಾಮಗಳಿಂದ ಹೆಸರಿಸದೆ ಬಂದಿರುವುದು ವೈಶಿಷ್ಟ್ಯಪೂರ್ಣ. ಈ ಧರ್ಮದ ತತ್ತ್ವಗಳನ್ನು ಒಪ್ಪಿಕೊಂಡವರು ಮುಸ್ಲೀಮರು. ತಾತ್ತ್ವಿಕ ಸ್ವರೂಪದಲ್ಲಿ ಇಸ್ಲಾಂ ಧರ್ಮವನ್ನು ಅನುಸರಿಸುವ ಮುಸ್ಲೀಮರಿಗೆ ಸರ್ವ ಸ್ವತಂತ್ರವಿದೆ.

"ಅರೆಬ್ಬಿ ಭಾಷೆಯ ಇಸ್ಲಾಂ ಎಂಬ ಪದವು 'ಸೀಲ್ಮ ಎಂಬ ಮೂಲದಿಂದ ಬಂದಿರುವುದು. 'ಸೀಲ್ಮ' ಎಂಬ ಪದಕ್ಕೆ ಏಕಮೇವ ಆರಾಧ್ಯನಾದ ಅಲ್ಲಾಹನಿಗೆ ಸಮಗ್ರ ಸ್ವರೂಪದಲ್ಲಿ ಶರಾಣಗುವಿಕೆ ಮತ್ತು ಅಜ್ಞಾನುಸರಣೆ ಎಂದರ್ಥ"[೫೩] 'ಇಸ್ಲಾಂ' ಎಂದರೆ ಶಾಂತಿ, ಅನುಸರಣೆ, ಅಲ್ಲಾಹನಲ್ಲಿ ಅಚಲವಾದ ಶ್ರದ್ಧೆಯನ್ನಿಟ್ಟು ಅಲ್ಲಾಹನ ಅಧೀನನಾಗಿರುವವನು, ಅಲ್ಲಾಹನಿಂದ ನಿರ್ಮಿತವಾದ ಪ್ರಾಣಿಗಳಿಗೆ ಕೈಲಾದ ಮಟ್ಟಿಗೆ ಸಹಾಯ ಮಾಡುವವನು ಮುಸ್ಲೀಮನು. ಈತನಿಗೆ ಯಾರಿಂದಲೂ ದುಃಖವಾಗಲಿ, ಭಯವಾಗಲಿ ಉಂಟಾಗದೆಂದು 'ಕುರ್ಆನ್' ಹೇಳುವುದು. ಅಲ್ಲಾಹನಿಗೆ ಶಾಂತಿ ಮತ್ತು ರಕ್ಷಣೆಯ ಕರ್ತೃ ಎಂದು ಕರೆಯುವರು.

'ಇಸ್ಲಾಂ ಎಂದರೆ ದೈವಿ ಸಂಕಲ್ಪಕ್ಕೆ ಶರಣಾಗತಿ ಎಂದೂ ಸಹ ಅರ್ಥ. ಮುಸ್ಲೀಮರ ನಂಬಿಕೆಯಂತೆ "ದೇವರು ಒಬನೇ ಆತ 'ಅಲ್ಲಾಹ' ಅವನ ಹೊರತಾಗಿ ಬೇರಾರು ಇಲ್ಲ. ಹಜರತ್ ಮಹಮ್ಮದರು (ಸೂ.ಅ) ಆತನ ಪ್ರವಾದಿ 'ಲಾ ಇಲಾಹ ಇಲ್ಲಲ್ಲಾಹು ಮಹಮ್ಮದುರ್‌ರಸೂಲುಲ್ಲಾಹಿ' ಹಜರತ್ ಮುಹಮ್ಮದರು (ಸೊ.ಅ) ಮಾತ್ರ ದೇವರ ಕಟ್ಟಕಡೆಯ ಪ್ರವಾದಿಯಾದ್ದರಿಂದ ಅವರು ಹೆಚ್ಚು ಸಮರ್ಥರು ಮತ್ತು ಅವರು ಹೇಳಿದುದುಅಧೀಕೃತ"[೫೪]

"ಇಸ್ಲಾಂ ಧರ್ಮವು ಅಲ್ಲಾಹನ ಅನುಸರಣೆ ಮತ್ತು ವಿಧೇಯತೆಯಾಗಿರುವುದರಿಂದ ಅದನ್ನು 'ಇಸ್ಲಾಂ' ಎಂದು ಹೆಸರಿಸಲಾಗಿದೆ"[೫೫] "ಇಸ್ಲಾಂ ಎಂಬ ಪದದ ಅರ್ಥ ಅನುಕರಣೆ, ವಿಧೇಯತೆ, ಮತ್ತು ಶಾಂತಿ ಎಂದಾಗಿದೆ. ಮನುಷ್ಯನು ತನ್ನ ಸೃಷ್ಟಿಕರ್ತ, ಪಾಲಕ, ಪ್ರಭು ಮತ್ತು ಅಧಿಪತಿಯಾದ ಅಲ್ಲಾಹನಿಗೆ ಸಂಪೂರ್ಣವಿಧೇಯನಾಗಿ ಅವನ ಆಜ್ಞೆಗಳನ್ನು ಅನುಸರಿಸಿ ಜೀವಿಸುವ ಜೀವನ ಪದ್ಧತಿ ಎಂಬುದೇ ಆ ಪದದ ತಾತ್ಪರ್ಯ. ಹಾಗೆ ಜೀವಿಸುವಾಗ ಅವನು ಇಹಪರಲೋಕಗಳಲ್ಲಿ ಶಾಂತಿ ಮತ್ತು ನೆಮ್ಮದಿ ಪಡೆಯುವನು."[೫೬] "ಅರೆಬ್ಬಿ ಬಾಷೆಯಲ್ಲಿ 'ಇಸ್ಲಾಂ ಶಬ್ಧಕ್ಕೆ ಅನುಸರಣೆ, ಆತ್ಮ ಸಮರ್ಪಣೆ ಅಥವಾ ಅಲ್ಲಾಹನ ಆದೇಶದ ಮೇರೆಗೆ ಮನುಷ್ಯ ತನ್ನ ಜೀವನವನ್ನು ಸಾಗಿಸಬೇಕು ಇದೇ ಇಸ್ಲಾಂ ಧರ್ಮದ ಗುರಿ. ಮಾನವನ್ನು ಸೃಷ್ಟಿಸಿದ ಅಲ್ಲಾಹನು ಜಗತ್ತಿನಲ್ಲಿ ಶಾಂತಿ ಮತ್ತು ಸುಖ ಜೀವನ ನಡೆಸಲೆಂದು ತನ್ನ ಪ್ರವಾದಿಗಳ ಮುಖಾಂತರ ಆದೇಶಗಳನ್ನು ಕಳುಹಿಸಿದನು. ಈ ಆದೇಶದಂತೆ ಜೀವನ ಮಾಡುವುದರಲ್ಲಿ ಮಾನವನ ಕಲ್ಯಾಣ ಅಡಗಿದೆ."[೫೭] ಈ ಮೇಲಿನ ಹೇಳಿಕೆಗಳ ಪ್ರಕಾರ 'ಇಸ್ಲಾಂ ಎಂಬ ಪದವು ಶಾಂತಿ ಅನುಸರಣೆ ಮತ್ತು ವಿಧೇಯತೆಗಳಿಂದ ಅಲ್ಲಾಹನಿಗೆ ಮೊರೆಹೋಗುವುದು, ಶರಣಾಗುವುದು ಅ ಅಲ್ಲಾಹನ ಪ್ರವಾದಿಗಳಿಂದ ಬಂದ ಸಂದೇಶಗಳನ್ನು ತಪ್ಪದೆ ಅನುಸರಿಸಿ, ಆ ಪ್ರವಾದಿಗಳಿಗೆ ವಿಧೇಯರಾಗಿ, ಅವರು ಹೇಳಿದ ತತ್ತ್ವಗಳಂತೆ ನಡೆದು ನುಡಿದು ದಾನ ಧರ್ಮಗಳಲ್ಲಿ ನಿರತರಾಗಿರುವುದು ಅನಂತರದಲ್ಲಿ ಅಲ್ಲಾಹನಲ್ಲಿ ಸೇರಿ ಶಾಂತಿಯನ್ನು ಪಡೆಯುವುದು ಎಂಬ ವಿಶಾಲ ಅರ್ಥವಿದೆ.

ಜಗತ್ತಿನ ಎಲ್ಲ ಸಮಾಜಗಳಲ್ಲಿ, ಸ್ತ್ರೀಶೋಷಣೆಯಲ್ಲಿ, ಧಾರ್ಮಿಕ ವ್ಯವಸ್ಥೆಯ ಪ್ರಧಾನ ಪಾತ್ರವಿದೆ. ಯಾಕೆಂದರೆ ಧರ್ಮಗಳು ಪುರುಷವಾದವನ್ನು ಜಾರಿ ಮಾಡುವ ಆಯುಧಗಳಾಗಿವೆ. ಬಹುತೇಕ ಧಾರ್ಮಿಕ ಕಟ್ಟುಪಾಡುಗಳು ಸ್ತ್ರೀಯರಿಗಾಗಿ ರಚಿತವಾಗಿವೆ. ಸ್ತ್ರೀ ಧಾರ್ಮಿಕ ಚೌಕಟ್ಟಿನೊಳಗೆ ಬಂಧಿಯಾಗಿದ್ದಾಳೆ. ಈ ಧಾರ್ಮಿಕ ಆಚರಣೆಗಳ ನೀತಿ ನಿಯಮಗಳನ್ನು ಪಾಲನೆ ಮಾಡುವ ನೆಪದಲ್ಲಿ ಸ್ತ್ರೀಯರನ್ನು ಶೋಷಿಸುವ ಪುರುಷಮಯ ಸಮಾಜ ರೂಪಗೊಂಡಿದೆ. ಧಾರ್ಮಿಕ ಚೌಕಟ್ಟಿನೊಳಗಿನ ಸ್ತ್ರೀಯರ ಬದುಕಿನ ಕರಾಳ ಚಿತ್ರಣವನ್ನು ಕಟ್ಪಾಡಿಯವರು ತಮ್ಮ ಕಾದಂಬರಿಗಳಲ್ಲಿ

ಸೂಕ್ಷ್ಮವಾಗಿ ಬಿಚ್ಚಿಡುತ್ತವೆ. ಈ ಕಾದಂಬರಿಗಳ ಮೂಲಕ ಮುಸ್ಲಿಂ ಸಮಾಜದ ಸ್ತ್ರೀಯರ ಬದುಕಿನ ಕಷ್ಟವನ್ನು ಅನಾವರಣಗೊಳಿಸಲಾಗಿದೆ.

ಮುಸ್ಲಿಂ ಸಮಾಜದಲ್ಲಿ ಹೆಣ್ಣನ್ನು ಪುರುಷ ತನಗೆ ಬೇಕಾದ ರೀತಿಯಲ್ಲಿ ಬಂಧಿಸಿ ನಾಲ್ಕು ಗೋಡೆಗಳ ಮಧ್ಯೆ ಇರಿಸಿದ್ದಾನೆ. ಅಂತೆಯೇ ಧರ್ಮವು ಹೆಣ್ಣನ್ನು ಬಂಧಿಸುವ ಬಲೆಯಾಗಿ ಪರಿಣಾಮಿಸಿರುವುದನ್ನು ನೋಡಬಹುದು. ಧರ್ಮದ ವಿಚಾರದಲ್ಲಿ ಗಂಡು ತನಗೆ ಅನುಕೂಲವಾಗುವಂತೆ ಹೆಣ್ಣನ್ನು ಹಿಡಿದಿಡುವ ಪ್ರಯತ್ನ ಮಾಡಿದ್ದಾನೆ. ಧರ್ಮಕ್ಕೆ ಅಂಟಿಕೊಂಡು ಬದುಕಿದಂತಹ ಮುಸಲ್ಮಾನ ಪುರುಷರು ಧರ್ಮದ ಹೆಸರಿನಲ್ಲಿ ಹೆಣ್ಣಿನಲ್ಲಿ ಭಯವನ್ನು ಮೂಡಿಸಿ ಅದರ ವಿರುದ್ಧ ಏನೂ ಮಾತನಾಡದಂತೆ ಮಾಡಿದರು. ಹೀಗೆ ಕಟ್ಪಾಡಿಯವರು ಹೆಣ್ಣಿನ ಮೇಲೆ ಪ್ರಭಾವ ಬೀರುತ್ತಿರುವ ಧರ್ಮದ ವಿಚಾರಗಳನ್ನು ತಮ್ಮ ಕಾದಂಬರಿಗಳಲ್ಲಿ ತಿಳಿಸಿದ್ದಾರೆ. ಮುಸ್ಲಿಂ ಸಮಾಜದಲ್ಲಿ ಧರ್ಮವನ್ನು ಪ್ರತಿನಿಧಿಸುವ ಧಾರ್ಮಿಕ ನಿಯಮಗಳಾಗಿ ಮಸೀದಿ, ಮಸೀದಿಯ ಮೌಲ್ವಿಗಳು, ತಲಾಖ್, ಘೋಷಾ ಪದ್ಧತಿಗಳ ಮಧ್ಯೆ ಸಿಲುಕಿ ಏನೂ ಮಾಡಲಾರದೆ ಮಾತನಾಡಲಾರದೆ ಎಲ್ಲವನ್ನೂ ಸಹಿಸಿಕೊಂಡು ಬದುಕುವ ಹೆಣ್ಣನ್ನು ಮೌನವಾಗಿ ಪ್ರತಿಭಟಿಸುವ ಹೆಣ್ಣನ್ನು ಕಟ್ಪಾಡಿಯವರು ತಮ್ಮ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ.

ಮುಸ್ಲಿಂ ಮಹಿಳಾ ಸಮಸ್ಯೆಗಳು ಕನ್ನಡ ಸಾಹಿತ್ಯದಲ್ಲಿ ದಾಖಲಾಗುತ್ತಿವೆ. ಅರಬ್ಬರ ತೆವಲಿಗೆ ಬಲಿಯಾಗಿ ತಲಾಕ್ ಪಡೆದ ಹುಡುಗಿಯರನೇಕರ ಬದುಕುಗಳು ನಮ್ಮ ಕಣ್ಣ ಮುಂದಿವೆ. ಫಕೀರ ಮುಹಮ್ಮದ್ ಕಟ್ಪಾಡಿಯವರ 'ಸರಕುಗಳು' ಕಾದಂಬರಿ ರಚಿತವಾಗಿ, ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದೆ. ಅದೇ ಸಂದರ್ಭದಲ್ಲಿ ಧಾರ್ಮಿಕಾಚರಣೆಯನ್ನು ಮೀರಿ ನಿಲ್ಲುವ ಸ್ತ್ರೀಪಾತ್ರಗಳನ್ನೂ ಕಟ್ಟಿಕೊಟ್ಟಿದ್ದಾರೆ. ಫಕೀರ್ ಮುಹಮ್ಮದ್ ಕಟ್ಪಾಡಿಯರ 'ಸರಕುಗಳು' ಕಾದಂಬರಿಯಲ್ಲಿ ತಲಾಕ್‌ನ ವಿಶಿಷ್ಟ ಸಮಸ್ಯೆಯನ್ನು ಎತ್ತಿಕೊಂಡಿದ್ದಾರೆ. ಕೇವಲ ಹಣಕ್ಕಾಗಿ ಭಾರತದ ನಿರ್ಗತಿಕ ಹೆಣ್ಣುಮಕ್ಕಳು ಅರಬರನ್ನು ನಿಕಾಹ್ ಮಾಡಿಕೊಳ್ಳುತ್ತಾರೆ. ತಮ್ಮ ದೇಶದಲ್ಲಿ ವಧು ದಕ್ಷಿಣೆ(ಮೆಹರ್) ರೂಪದಲ್ಲಿ ಅಪಾರವಾದ ಹಣ ಕೊಟ್ಟು ನಿಕಾಹ್ ಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲ. ಅದಕ್ಕಾಗಿ ಇವರು ವ್ಯಾಪಾರದ ಉದ್ದೇಶದಿಂದ ಕಡಲ ತೀರಕ್ಕೆ ಬರುತ್ತಾರೆ. ಭಾರತದಲ್ಲಿ ಬಡ ಹೆಣ್ಣು ಮಕ್ಕಳು ವರದಕ್ಷಿಣೆ ಕೊಡಲಾಗದೆ ಮದುವೆಯ ಕನಸನ್ನೇ ಕಾಣದವರು ಅರಬಿಗಳನ್ನು ಈ ಬಡ ಮುಗ್ಧ ಹೆಣ್ಣುಗಳನ್ನು ಮದುವೆಯಾಗಿ ಒಂದೆರಡು ತಿಂಗಳು ಸುಖಪಟ್ಟು ನಂತರ ಧರ್ಮವೇ ಕೊಟ್ಟಿರುವ ಹಕ್ಕಿನ ತಲಾಕ್‌ನ್ನು ಕೊಡುತ್ತಾರೆ. ಅಲ್ಪ ಮೊತ್ತದ 'ಮೆಹರ್' ಹಣವನ್ನು ಆ ಬಡವಿಯ ಕೈಗಿಟ್ಟು ಕಾಲ್ಕೀಳುತ್ತಾರೆ. ಒಂದು ವೇಳೆ ಅವನಿಂದ ಆ ಮುಗ್ಧೆ ಬಸುರಿಯಾದರೆ ಅವನಂತೂ ತನ್ನ

ದೇಶಕ್ಕೆ ಹೊರಟು ಹೋಗಿರುತ್ತಾನೆ. ಆ ನಿರ್ಗತಿಕ ಹೆಣ್ಣುಗಳೇ ಮಕ್ಕಳ ಜಬಾಬ್ದಾರಿಯನ್ನು ಹೊರಬೇಕಾದ ಸಂಕಟದ ಸ್ಥಿತಿಯಿದೆ. ಫಕೀರರು ಕಡಲ ತೀರದ ಬಡವರ ಬದುಕಿನ ಘೋರ ಅಧ್ಯಾಯಗಳನ್ನು ಕಾದಂಬರಿಯಲ್ಲಿ ತೆರೆದಿಟ್ಟಿದ್ದಾರೆ.

ಇದೇ ರೀತಿ ಸಾರಾ ಅಬೂಬಕ್ಕರ ಅವರ 'ಚಪ್ಪಲಿಗಳು' ಕತೆಯ ಒಂದು ನಿದರ್ಶನ ಕೊಡುವುದಾದರೆ "ಹೆಂಗಸರನ್ನು ಕಾಲಿನ ಚಪ್ಪಲಿಯಂತೆ ಬಳಸಿಕೊಳ್ಳಬೇಕು, ಬೇಕಾದಾಗ ಉಪಯೋಗಿಸಿ ಬೇಡವಾದಾಗ ಮೂಲೆಯಲ್ಲಿ ಬಿಟ್ಟು ಬಿಡಬೇಕು"[೫೮] ಇಲ್ಲಿ ಹೆಣ್ಣನ್ನು ತುಳಿಯುವ ಅಸ್ತ್ರವಾಗಿ ಧರ್ಮ ಬಳಕೆಯಾಗುತ್ತಿದೆ. ಮೇಲಿನ ಮಾತಿಗೆ ಇದು ಒಂದು ಉತ್ತಮ ನಿದರ್ಶನವಾಗಿ ಕೊಡಬಹುದು.

'ಸರಕುಗಳು' ಕಾದಂಬರಿಯಲ್ಲಿ ಬರುವ ನಾಯಕಿ ಹಾಜೀಮ ಬಡವಳು, ಗುಡಿಸಲು ಕೇರಿಯವಳು ದುಡ್ಡಿನ ಧಣಿಗಳಾದ ಅರಬರ ಕಾಮತೃಷೆ ನೀಗಿಸುವುದಕ್ಕೆ ಧರ್ಮದ ಆಸರೆಯಲ್ಲಿಯೇ ಬಲಿಯಾದವಳು. ಅರಬನಿಗೆ ಬಲಿಯಾಗಿ ಹೆಣ್ಣುಮಗುವಿನ ತಾಯಿಯಾದವಳು. ಧರ್ಮದಾವರಣದ ಈ ಮದುವೆ ವೇಶ್ಯಾವಾಟಿಕೆಗಿಂತ ಭಿನ್ನವಲ್ಲ. ಶ್ರೀಮಂತ ಮುಸ್ಲಿಂ ಗಂಡಸರು ಬಡ ಮುಸ್ಲಿಂ ಹೆಣ್ಣುಮಕ್ಕಳ ಜೊತೆ ಧರ್ಮದ ಹೆಸರಿನಲ್ಲಿ ನಿಕಾಹ್ ಮತ್ತು ತಲಾಕ್ ಆಟವಾಡುತ್ತಾರೆ. ಅರಬರು ಅವರನ್ನು ಭೋಗದ ವಸ್ತುಗಳಾಗಿ ಬಳಸುತ್ತಾರೆ. ಧರ್ಮದ ಮುಸುಕಿನಡಿ ಮಾರಾಟದ ಸರಕಾಗುತ್ತಾರೆ. ಸಂತೆಯ ಶೋಭೆಯಾಗುತ್ತಾರೆ. ಬಡವರ ಬದುಕಿನ ದುರಂತದ ಕತೆಯೇ 'ಸರಕುಗಳು" ಕಾದಂಬರಿಯ ವಸ್ತುವಾಗಿದೆ. ಮುಸ್ಲಿಂ ಸನಾತನ ಪುರೋಹಿತಶಾಹಿಗಳು, ಧಾರ್ಮಿಕ ತತ್ವಗಳನ್ನು ಮನಬಂದಂತೆ ಅರ್ಥೈಸುವ, ಸ್ವಾರ್ಥ ರಾಜಕಾರಣ ಮಾಡುತ್ತಿರುವುದಕ್ಕೆ ಈ ಕಾದಂಬರಿ ಕನ್ನಡಿಯಾಗಿದೆ.

"ಭಾರತದಾದ್ಯಂತ ನಡೆಯುತ್ತಿರುವ 'ತಲಾಕ್'ಗೆ ಸಂಬಂಧಿಸಿದಂತೆ ವಾಸ್ತವಾಂಶಗಳನ್ನು ಗಮನಿಸಿದರೆ, ಅವುಗಳು ಇಸ್ಲಾಂ ಧರ್ಮದ ಪ್ರಕಾರ ನಡೆದಂಥವುಗಳಲ್ಲ ಇಸ್ಲಾಂ, ಮಹಿಳೆ, ಮಕ್ಕಳು, ಬಡವರು ಮತ್ತು ಅನಾಥರ ಪರವಾಗಿದೆ. ಒಬ್ಬ ಶ್ರದ್ಧಾವಂತ ಮುಸ್ಲಿಂ ತಲಾಕ್‌ನ್ನು ವಿರೋಧಿಸುತ್ತಾನೆ. ಅದನ್ನು ಪೈಗಂಬರರೂ ದ್ವೇಷಿಸುತ್ತಾರೆ. ಒಂದು ವೇಳೆ ಶಾಬಾನು ಪ್ರಕರಣದ ಸಂಬಂಧದಲ್ಲಿ ಪೈಗಂಬರೇ ಎದುರಿಗಿದ್ದರೆ ಅವರೂ ಸಹ ಅವಳಿಗೆ 'ತಲಾಕ್' ನೀಡುವುದನ್ನು ಅನುಮತಿಸುತ್ತಿದ್ದಿಲ್ಲ. ಪಾಕಿಸ್ತಾನದ ಇಸ್ಲಾಮಾಬಾದಿನಲ್ಲಿ ೩೧-೧೨-೧೯೮೬ರಲ್ಲಿ ಒಂದು ಘಟನೆ ನಡೆಯಿತು. "ಪಾಕಿಸ್ತಾನದ ದೂರದರ್ಶನದಲ್ಲಿ ಒಂದು ನಾಟಕ ಬಿತ್ತರವಾಯಿತು. ನಾಟಕದ ದೃಶ್ಯವೊಂದರಲ್ಲಿ ನಾಯಕ ನಟ 'ಉಸ್ಮಾನ್ ಪೀರಜಾದ್' ಮೂರು ಬಾರಿ 'ತಲಾಕ್' ಹೇಳುವ ಪ್ರಸಂಗ ಬರುತ್ತದೆ.

ದುರಾದೃಷ್ಟಕ್ಕೆ ನಾಟಕದಲ್ಲಿಯೂ ಹೆಂಡತಿಯ ಪಾತ್ರ ವಹಿಸಿದ್ದ 'ಸಮೀನಾ' ಅವರ ದರ್ಮಪತ್ನಿಯಾಗಿರುತ್ತಾರೆ. ಮೂರು ಬಾರಿ 'ತಲಾಕ್' ಹೇಳಿರುವುದರಿಂದ ಸಮೀನಾ ಪೀರಜಾದಾ ಅವರ ವಿವಾಹ ವಿಚ್ಛೇದನವಾಗಿದೆ. ಅದಕ್ಕೆ ಅವರು 'ಒಟ್ಟಿಗೆ ಇರುವಂತಿಲ್ಲ' ಎಂದು ಧರ್ಮಪಂಡಿತರು ಹೇಳಿದರು"[೫೯] ಹೀಗೆ ಮುಸ್ಲಿಂ ಸನಾತನ ಪುರೋಹಿತ ಶಾಹಿಗಳು, ಧಾರ್ಮಿಕ ತತ್ವಗಳನ್ನು ಮನಬಂದಂತೆ ಅರ್ಥೈಸುವ, ಸ್ವಾರ್ಥ ರಾಜಕಾರಣ ಮಾಡುತ್ತಿದ್ದಾರೆ. ಹೆಣ್ಣನ್ನು ತಮ್ಮ ಕಾಲಿನ ಚಪ್ಪಲಿಯಂತೆ ತುಳಿಯುತ್ತಿದ್ದಾರೆ. ಈ ಮೂಲಕ 'ತಾಯಿಯ ಪಾದದಡಿಯಲ್ಲಿ ಸ್ವರ್ಗವಿದೆ' ಎಂಬ ಮಾತಿಗೆ ಅರ್ಥವೇ ಇಲ್ಲದಂತಾಗಿದೆ. ಈ ಬಡ ಹೆಣ್ಣುಗಳ ಸಂವೇದನೆಯನ್ನು ಲೇಖಕರು ಪ್ರಬಲವಾಗಿ ದಾಖಲಿಸಿದ್ದಾರೆ. ಅವಳ ಸಂವೇದನಾಶೀಲ ಅನುಭವಗಳಿಗೆ ರಾಚನಿಕ ರೂಪ ನೀಡಿದ್ದಾರೆ. ಸರಕುಗಳು ಕಾದಂಬರಿಯಲ್ಲಿ ಹಾಜೀಮಳಂತಹ ಬಡ ಮುಸ್ಲಿಂ ಹೆಣ್ಣುಗಳ ಸಮಸ್ಯೆಗಳಿವೆ. ಸೈದುಕೋೕಯನಂತಹ ತಲೆ ಹಿಡುಕರಿದ್ದಾರೆ. ಮುಸ್ತಫಾನಂತಹ ಮುದಿ ಹಣವಂತ ಅರಬರ ಶೋಕಿಗಳಿವೆ. 'ಒಡಲಾಳ'ದ ಸಾಕವ್ವನಂತಹ ಗಟ್ಟಿಯಾದ ಪಾತ್ರ ಹಾಜೀಮಾಳದು. ಕಚ್ಚಾದ ಮತ್ತು ಗಸ್ಸಾಲಿನ್‌ರಂತಹ ಗಟ್ಟಿ ಹೆಣ್ಣು ಪಾತ್ರಗಳನ್ನು ಲೇಖಕರು ಕನ್ನಡಕ್ಕೆ ನೀಡಿದ್ದಾರೆ. ಹಾಜಿಮಳಂತಹವಳ ವ್ಯಕ್ತಿತ್ವದ ಬಗ್ಗೆ ಮುಮ್ಮಟ್ಟಿಯಂತವರೂ ಹೇಳುತ್ತಾರೆ. "ಅವಳ ಸಾಮರ್ಥ್ಯದೆದರು ತಾನೊಂದು ಹುಳ ಅನಿಸಿತು"[೬೦] ಪೊಳ್ಳು ಆದರ್ಶವಾದ ಹೇಳುವ ಸಂಘ ಸಂಸ್ಥೆಗಳಿಗೆ ಹಾಜಿಮ ಸವಾಲು ಹಾಕುತ್ತಾಳೆ. "ನಾನು ನನ್ನ ಮಗಳನ್ನು ಅರಬನಿಗೆ ಕೊಡುವುದಿಲ್ಲ. ಆದರೆ ನೀನು ಮದುವೆಯಾಗುತ್ತೀಯ?"[೬೧] ಎಂದಾಗ ಪೊಳ್ಳು ಆದರ್ಶವಾದಿಗಳೂ ಛಿದ್ರವಾಗುತ್ತಾರೆ. ಕಾದಂಬರಿಯುದ್ಧಕ್ಕೂ ಅಸಹಾಯಕ ಹಾಜೀಮಳನ್ನು ಶಕ್ತಿಯುತವಾಗಿ ಚಿತ್ರಿಸಲಾಗಿದೆ. ಲಂಪಟ ಧರ್ಮದ ಠೇಕೇದಾರರು ಅನುಕೂಲಕ್ಕೆ ತಕ್ಕಂತೆ ಧರ್ಮ, ದೇವರು ಎಲ್ಲವನ್ನೂ ಬಳಸಿಕೊಳ್ಳುತ್ತಾರೆ. ತಲಾಕ್ ಹಣವಂತರ ಆಟಿಕೆಯಾಗಿರುವುದು ಸತ್ಯವಾಗಿದೆ.

ಪಕೀರ್ ಮುಹಮ್ಮದ್ ಕಟ್ಪಾಡಿಯವರ 'ಕಚ್ಚಾದ' ಕಾದಂಬರಿಯಲ್ಲಿ ಸೂಫೀ ಬ್ಯಾರಿಯು ಮದುವೆಯಾದ ಹೊಸದರಲ್ಲಿ ಹೆಂಡತಿಗೆ ಕಚ್ಚಾದಳಿಗೆ ಬಾಡಿ, ಲಂಗ ತಂದು ಕೊಟ್ಟಿದ್ದಕ್ಕಾಗಿ ಅವಳ ಅತ್ತೆ ಕೆಂಡಾಮಂಡಲಳಾಗಿ ಕೂಗಾಡಿದಳು. "ನಿನ್ನ ಹೆಂಡ್ತಿಯನ್ನು ಬೆಳ್ಳಕಾರರ ಲೇಡಿ ಮಾಡುತ್ತೀಯೇನೋ ನನ್ನ ಮಗನೇ...? ಈ ಲಂಗ, ಬಾಡೀಸ್, ಹಾಕ್ಲಿಕ್ಕೆ ಶುರು ಮಾಡಿ ಜಹನ್ನುಂ ಅನ್ನೋ ನರಕಕ್ಕೆ ದಾಖಲು ಮಾಡ್ತಿಯಾ? ನನ್ನ ಮನೆತನದ ಹುಡಿಗೀರೆಲ್ಲ ಇವ್ಳ ಹಾಗೆ ವೇಷ ಕಟ್ಟೋದಕ್ಕೆ ಸುರು ಮಾಡಿದ್ರೆ ಅವ್ರನ್ನು ಮದ್ವೆ ಆಗೋದಕ್ಕೆ ಯಾರೂ ಬಂದಾರೋ.....?"[೬೨]

ಮುಸ್ಲಿಂ ಹೆಣ್ಣು ಸೀರೆಯ ಒಳಗೆ ಲಂಗ, ಬ್ಲೌಸಿನೊಳಗೆ ಬಾಡಿ ತೊಡುವುದಕ್ಕೆ ನಾಲ್ಕು ಗೋಡೆಗಳೊಳಗಡೆಯೇ ದೀರ್ಘ ಹೋರಾಟ ಮಾಡಿದ್ದಾಳೆ. ಅವಳು ಅದಕ್ಕಾಗಿ ಬೀದಿಗಿಳಿದು

ಹೋರಾಟ ಮಾಡದಿರಬಹುದು. ಆದರೆ ಅವಳ ಮೌನ ಹೋರಾಟದ ಧ್ವನಿಯ ದಾಖಲಾತಿ ಇಲ್ಲಿಯವರೆಗಿನ ಶಿಷ್ಟ ಸಾಹಿತ್ಯದಲ್ಲಿ ಕಂಡುಬಂದಿಲ್ಲ. ಲಂಗ, ಬಾಡಿ ತೊಟ್ಟರೂ ಸಹ ಅತ್ತೆಯ ಸಿಟ್ಟು, ತಿವಿತ ಸಹಿಸಬೇಕಾಗಿತ್ತು. ಉಡುಪಿನ ವಿಷಯ ಒಂದು ಕಡೆಯಾದರೆ "ಗಂಡನೊಂದಿಗೆ ಮಲಗುವುದಕ್ಕೂ ಅತ್ತೆಯ ಪರವಾನಗಿ ಬೇಕಿತ್ತು". "ಒಳ್ಳೆಯ ದಿನಗಳಂದು ಗಂಡನನ್ನು ಸೇರಿದರೆ ಒಳ್ಳೆಯ ಮಕ್ಕಳು ಹುಟ್ಟವೆ"[೬೩] ಎಂದು ಬೇರೆ ದಿನಗಳಂದು ಕಚ್ಚಾದಳ ಅತ್ತೆ ಅವಳನ್ನು ಬೇರೆ ಕೋಣೆಯಲ್ಲಿ ಮಲಗಿಸುತ್ತಿದ್ದಳು. ಅತ್ತೆಗೆ ಹೆದರಿ ಕಚ್ಚಾದಳು ಕದ್ದು ಕದ್ದು ಬಾಡಿ, ಲಂಗ ತೊಟ್ಟು, ಅತ್ತೆಗೆ ಕಾಣದಂತೆ ಮೈತುಂಬ ಸೆರಗು ಪಾದ ಮುಚ್ಚುವಂತೆ ಸೀರೆ ತೊಟ್ಟು ಲಂಗ ಕಾಣದಂತೆ ಮಾಡುತ್ತಿದ್ದಳು. ಅತ್ತೆಗೆ ಕಾಣದಂತೆ ಅವುಗಳನ್ನು ಒಗೆದು ಬೇರೆ ಬಟ್ಟೆಗಳಡಿಯಲ್ಲಿ ಮರೆಮಾಡಿ ಒಣಗಿಸುತ್ತಿದ್ದಳು.

ವಸ್ತ್ರಸಂಹಿತೆಯನ್ನು ಪುರುಷ ಸಮಾಜವೇ ಧರ್ಮದ ಹೆಸರಿನಲ್ಲಿ ಹೇರಿದ್ದಾದರೂ ಅದನ್ನು ಶ್ರದ್ಧೆಯಿಂದ ಆಚರಿಸಿಕೊಂಡು ಬಂದವಳು ಕಚ್ಚಾದಳ ಅತ್ತೆಯಂತಹ ಹೆಣ್ಣುಗಳೇ ಆಗಿದ್ದಾರೆ.

ಬಾಲಿವುಡ್ ನಟಿ ಶಬಾನಾ ಅಜ್ಮಿ ಹೇಳುತ್ತಾರೆ, "ಮುಸ್ಲಿಂ ಮಹಿಳೆಯರು ಬುರ್ಖಾ ಧರಿಸುವುದನ್ನು ಕಡ್ಡಾಯಗೊಳಿಸಿಲ್ಲ ಎಂದು. ಅಖಿಲ ಭಾರತದ ಮುಸ್ಲಿಂ ವೈಯಕ್ತಿಕ ಕಾನೂನು ಮಂಡಳಿಯ ಸದಸ್ಯ ಮತ್ತು ಲಖನೌದ ಐತಿಹಾಸಿಕ "ತೀಲೇವಾಲಿ ಮಸೀದಿಯ" ಇಮಾಮ್ ಮೌಲಾನಾ ಖಲೀದ್ ರಶೀದ್ ಫಿರಂಗಿಯವರು ಹೇಳುತ್ತಾರೆ, "ಮುಸ್ಲಿಂ ಮಹಿಳೆಯರು ಬುರ್ಖಾ ಧರಿಸಬೇಕೆಂದು ಕುರಾನ್‌ನಲ್ಲಿ ಸ್ಪಷ್ಟವಾಗಿ ತಿಳಿಸಲಾಗಿದೆ." ಎಂದು ಆದರೆ ಅಖಿಲ ಭಾರತ ಸಂಯುಕ್ತ ಮೋರ್ಚಾದ ಉಪಾಧ್ಯಕ್ಷ ಎಂ.ಎ ಸಿದ್ಧಿಕಿ ಅಭಿಪ್ರಾಯದಂತೆ "ನಿರ್ದಿಷ್ಟ ಉಡುಗೆ ತೊಡುವಂತೆ ಇನ್ನೊಬ್ಬರಿಗೆ ಆದೇಶಿಸುವ ಅಧಿಕಾರ ಯಾರಿಗೂ ಇಲ್ಲ"[೬೪] ಎನ್ನುತ್ತಾರೆ.

ಪುರುಷ ಪ್ರಧಾನ್ಯದ ಚೌಕಟ್ಟಿನಲ್ಲಿರುವ ಮುಸ್ಲಿಂ ಮಹಿಳೆ ನಿರ್ಬಂಧಗಳಲ್ಲಿ ಬದುಕಿದ್ದಾಳೆ. ಕೌಟುಂಬಿಕ ವಲಯಗಳಲ್ಲಿಯ ನಿರ್ಬಂಧಗಳ ಪ್ರಕಾರ ಅವಳು ಜೋರಾಗಿ ನಡೆಯುವಂತಿಲ್ಲ. ಜೋರಾಗಿ ನಗುವಂತಿಲ್ಲ, ಜೋರಾಗಿ ಅಳುವಂತಿಲ್ಲ. ಪುರುಷರೊಂದಿಗೆ ಮಾತಾಡುವಂತಿಲ್ಲ. ಬುರ್ಖಾ ಧರಿಸದೇ ಹೊರಗೆ ಬರುವಂತಿಲ್ಲ. ಹೀಗೆ ಅಸಂಖ್ಯ ನಿಷೇಧಗಳ ಮಧ್ಯೆ ಮುಸ್ಲಿಂ ಮಹಿಳೆ ಬದುಕಿದ್ದಾಳೆ. ಗಂಡು ಯಾವತ್ತೂ ನಿಷೇಧ ನಿರ್ಬಂಧಗಳಲ್ಲಿ ಅವಳನ್ನಿಟ್ಟಿದ್ದಾನೆ. ಅದರಲ್ಲಿ ವಸ್ತ್ರಸಂಹಿತೆಯೂ ಒಂದಾಗಿದೆ. ಕೆಲವೊಮ್ಮೆ ಸಂಪ್ರದಾಯದ ಹೆಸರಿನಲ್ಲಿ ವಸ್ತ್ರಸಂಹಿತೆ ಹೇರಿದರೆ, ಕೆಲವೊಮ್ಮೆ ಅತಿಯಾದ ಪ್ರೀತಿಯ ನೆಪದಲ್ಲಿ ಹೇರಲಾಗುತ್ತದೆ.

ಮುಸ್ಲಿಂ ಸಂಪ್ರದಾಯ ಕುರಿತು 'ಅಮ್ಮ ಆಚಾರ ನಾನು' ಎಂಬ ಕವನದಲ್ಲಿ ನಿಸಾರ್ ಮತ್ತು ಅವರ ತಾಯಿಯು ಹೀಗೆ ಹೇಳುವರು.

"ಅಮ್ಮ ಕಟ್ಟಾ ಸಂಪ್ರದಾಯಸ್ಥೆ
ಖುರಾನು ನಮಾಜು, ರಂಜಾನಿನ ಉಪವಾಸ
ಧಾರ್ಮಿಕಾಚಾರಗಳಲ್ಲಿ ಹೇಳತೀರದ ಆಸ್ಥೆ
ಬುರ್ಖಾ ತೊಡದೆ ಬೀದಿಯ ಹಾದು ಹೋಗುವ ನಮ್ಮವರ
ಹೆಣ್ಣುಗಳ ಕಂಡು ಕಿಡಿಕಿಡಿಯಾಗಿ
ಹೆಚ್ಚು ಕಲಿತ ಬಜಾರಿಗಳ ಹಣೆ ಬರಹವೇ ಇಷ್ಟು
ದೇವರು ಧರ್ಮಗಳ ಭಯವಿಲ್ಲದೆ ಎಳಷ್ಟು
ಸದಾ ಬುಖಾ ತೊಡುವ ಕರಡಿಯನ್ನು"[೬೫]

ಇಲ್ಲಿ ಸಂಪ್ರದಾಯ-ಸಂಸ್ಕೃತಿ ನಾಗರಿಕತೆಗಳ ಕುರಿತು ಪ್ರಸ್ತಾಪಿಸಿದ್ದಾರೆ. ಸಂಪ್ರದಾಯಸ್ಥ ಅಮ್ಮನಿಗೆ ಮದುವೆ ಮುಂಚೆ ಹುಡುಗಿಯನ್ನು ನೋಡುವುದು ಧರ್ಮ ನಿಷಿದ್ಧ. ಆದರೆ ಮುಂದೆ ತನ್ನ ಮನೋಧರ್ಮ ಬದಲಾಯಿಸಿಕೊಂಡು ನಿನ್ನಿಷ್ಟದಂತೆ ಮದುವೆಯಾಗು ಎಂದು ಹೇಳುತ್ತಾಳೆ. ಆದರೆ ವಿದ್ಯಾವಂತೆ ಸೊಸೆಯು ಬುರ್ಖಾ ಹಾಕಿಕೊಂಡು ಬರುವುದು ಸಂಪ್ರದಾಯವನ್ನು ತೋರಿಸುತ್ತದೆ. ಎಷ್ಟೇ ಕಲಿತರೂ ಮುಸ್ಲಿಂ ಮಹಿಳೆಯರು ಸಂಪ್ರದಾಯದಿಂದ ಹೊರಬರಲು ಇಚ್ಛಿಸುವುದಿಲ್ಲವೆನ್ನುವುದು ಇಲ್ಲಿಯ ಧ್ವನಿ.

'ಸರಕುಗಳು' ಕಾದಂಬರಿಯಲ್ಲಿ ಸಲೀಮ್‌ನು ತನ್ನ ತಂದೆ ಸೈದು ಕೋಯಾನಿಗೆ ಹಾಜಿ ಅವಮಾನ ಮಾಡಿದನು ಎಂಬ ಒಂದೇ ಕಾರಣವನ್ನು ಮುಂದಿಟ್ಟುಕೊಂಡು ಧರ್ಮದ ಹೆಸರಿನಲ್ಲಿ ಏನು ತಿಳಿಯದ ಮುದ್ಧೆಯಾದ ಆಯಿಷಾಳಿಗೆ ತಲಾಕ್ ಕೊಡುತ್ತಾನೆ. ಪುರುಷ ಪ್ರಧಾನ ವ್ಯವಸ್ಥೆ ಧಾರ್ಮಿಕ ಹೆಸರಿನಲ್ಲಿ ಹೆಣ್ಣನ್ನು ಅಸಹಾಯಕಗೊಳಿಸುವ ಈ ಹುನ್ನಾರ ನಡೆಯುತ್ತದೆ. ಧರ್ಮದ ಪರಿಕಲ್ಪನೆಗಳನ್ನು ಪುರುಷವಾದಿಗಳು ಅಮಾನುಷವಾಗಿ ಬಳಸಿಕೊಳ್ಳುತ್ತಿದ್ದಾರೆ ಎನ್ನುವುದನ್ನು ಈ ಕಾದಂಬರಿ ತೋರಿಸುತ್ತದೆ.

ಇದೇ ರೀತಿ 'ಕಚ್ಚಾದ' ಕಾದಂಬರಿಯಲ್ಲಿ ಹಾಜಿಯವರು ಧರ್ಮದ ಹೆಸರಿನಲ್ಲಿ ಕಚ್ಚಾದಳಿಗೆ ಭಯವನ್ನು ಹುಟ್ಟಿಸುವ ಕೆಲಸವನ್ನು ಮಾಡುತ್ತಾನೆ. "ಏ ಹೋಗೇ ಮುದ್ಕಿ, ಪರ್ದಾ ಮಾಡದ ಗದ್ದೆಯಲ್ಲಿ ಕೂಲಿ ಮಾಡೋ ಜಾಹಿಲಿ ಹೆಂಗಸೇ ನಿಂಗೆ ಅಲ್ಲಾಹನ ನೆನಪೇ... ಆಖಿರತ್‌ನ ನೆನಪೇ?"[೬೬] ಎಂದು ಭಯವನ್ನು ಹುಟ್ಟಿಸಲು ಪ್ರಯತ್ನಿಸುತ್ತಾನೆ.

ಕನ್ನಡ ಸಾಹಿತ್ಯದಲ್ಲಿ ಇಸ್ಲಾಂ ಲೋಕದ ಪಡಿಯಚ್ಚುಗಳಾಗಿ ಮೂಡಿಬಂದ ಕಥೆ ಕಾದಂಬರಿಗಳಲ್ಲಿ ಬಡವರು, ಮಧ್ಯಮ ವರ್ಗದ ಮುಸ್ಲಿಂ ಪಾತ್ರಗಳಿವೆ. ಕಡುಬಡತನವಿದ್ದರೂ ಒಬ್ಬ ಹೆಂಡತಿಯನ್ನು ಸಾಕಲು ಸಾಧ್ಯವಾಗದಿದ್ದರೂ ಮತ್ತೊಬ್ಬಳನ್ನು ಕಟ್ಟಿಕೊಂಡಿರುವ ಉದಾಹರಣೆಗಳಿವೆ. ಫಕೀರರ ಕಥೆ ಕಾದಂಬರಿಗಳಲ್ಲಿ ಇಂತಹ ಪಾತ್ರಗಳಿವೆ. ಸಾಮಾನ್ಯವಾಗಿ ಇಸ್ಲಾಂ ಧರ್ಮದವರು ನಾಲ್ಕರವರೆಗೆ ಮದುವೆಯಾಗಬಹುದು ಎಂಬ ನಿಯಮ ಮಾಡಿರುವಾಗಿನ ಸಾಮಾಜಿಕ ಪರಿಸ್ಥಿತಿಯನ್ನು ನೋಡಿದರೆ ಆಗ ಅದು ಸರಿಯಾಗಿತ್ತು. ಆದರೆ ಉಳಿದ ಜನರು ಮುಸ್ಲಿಂಮರು ಒಬ್ಬೊಬ್ಬರು ನಾಲ್ಕು ವಿವಾಹ ಆಗುತ್ತಾರೆ. ಅವರು ಲಂಪಟರು ಎಂದೆಲ್ಲ ವಿಚಾರ ಮಾಡುತ್ತಾರೆ. ಅಂಕಿ ಅಂಶಗಳನ್ನು ಗಮನಿಸಿದಾಗ ಭಾರತದ ೧೦೦೦ ಜನ ಪುರುಷರಿಗೆ ಕೇವಲ ೯೨೭ ಜನ ಮಹಿಳೆಯರಿದ್ದಾರೆ. ಒಂದು ವೇಳೆ ನಾಲ್ಕು ಮದುವೆಯಾಗುತ್ತಿದ್ದರೆ ೧೦೦೦ ಜನ ಪುರುಷರಿಗೆ ನಾಲ್ಕು ಸಾವಿರ ಹೆಣ್ಣುಗಳು ಬೇಕಾಗುತ್ತಿದ್ದರು. ಮುಸ್ಲಿಂರಲ್ಲಿ ಈ ಅನುಪಾತ ಒಂದು ಸಾವಿರಕ್ಕೆ ೯೩೭ರಷ್ಟಿದೆ.

ಜಗತ್ತಿನ ಎಲ್ಲಾ ಅಲ್ಪಸಂಖ್ಯಾತರು ಬಡವರಾಗಿದ್ದಾರೆ. ಅಂಕಿ ಸಂಖ್ಯೆಗಳ ಪ್ರಕಾರ ಬಹುಪತ್ನಿತ್ವ ಮುಸ್ಲಿಂ ಸಮಾಜಕ್ಕಿಂತಲೂ ಹಿಂದೂ ಸಮಾಜದಲ್ಲಿಯೇ ಹೆಚ್ಚಿಗೆ ಇರುವುದು ಕಂಡು ಬರುತ್ತದೆ. ಸಮಾಜಸುಧಾರಣಾ ಆಂದೋಲನಗಳು ನಡೆಯುತ್ತಿರುವುದರಿಂದ ಮುಂದಿನ ದಿನಗಳಲ್ಲಿ ಇನ್ನೂ ಹೆಚ್ಚಿನ ಬದಲಾವಣೆಗಳಿಗೆ ಕಾರಣವಾಗಬಹುದು. ಮುಸ್ಲಿಂ ಸಮುದಾಯದ ವಿಧವೆಯರು ಮತ್ತು ಪರಿತ್ಯಕ್ತೆಯರ ಸ್ಥಿತಿಗಳು ಇತರೇ ಸಮುದಾಯದ ಮಹಿಳೆಯರಿಗಿಂತ ಉತ್ತಮವಾಗಿವೆ.

ಮುಸ್ಲಿಂ ಸಮುದಾಯದ ಎಳೆಯ ಪ್ರಾಯದ ಹೆಣ್ಣುಗಳ ಮಾರಾಟ ಅಂತರಾಷ್ಟ್ರಮಟ್ಟದಲ್ಲಿ ಉಳಿದ ಸಮುದಾಯಗಳಿಗಿಂತಲೂ ಜಾಸ್ತಿಯಿಗೆ. ಇದು ಆ ಸಮುದಾಯದ ಹೆಣ್ಣಿನ ಆರ್ಥಿಕ ದುಸ್ಥಿತಿಯನ್ನು ಸೂಚಿಸುತ್ತದೆ. ತಂದೆಯ ಆಸ್ತಿಯಲ್ಲಿ ಹೆಣ್ಣಿಗೆ ಪಾಲು ಕೊಟ್ಟಿರುವ ವಿಶ್ವದ ಮೊಟ್ಟ ಮೊದಲ ಧರ್ಮ ಇದಾಗಿದೆ. ಆದರೂ ಈ ಧರ್ಮದ ಮಹಿಳೆ ಬಡವಿಯಾಕಾಗಿದ್ದಾಳೆ? ಸ್ತ್ರೀಯರಿಗೆ 'ಖುಲಾಹ್'ದ ಅಧಿಕಾರವಿರುವಂತೆ ಪುರುಷರಿಗೆ 'ತಲಾಕ್'ನ ಅಧಿಕಾರಿವಿದೆ. ಮತ ಪಂಡಿತರ ದಬ್ಬಾಳಿಕೆಯಿಂದ ಸ್ತ್ರೀಯರಿಗೆ ಅಸಮಾನವಾಗುತ್ತಿದೆ. ಧರ್ಮದ ನಿಜವಾದ ಹಕ್ಕುಗಳು ಅವರಿಗೆ ದೊರೆಯುವಂತಾಗಬೇಕು. ಮುಸ್ಲಿಂರಲ್ಲಿರುವ ಕಡುಬಡತನ ಸಾಕ್ಷರತೆಯ ಕೊರತೆ, ಹೆಚ್ಚು ಹೆಚ್ಚು ಅವರನ್ನು ಮತೀಯ ದಾಸ್ಯಕ್ಕೆ ಒಳಪಡಿಸುತ್ತಿದೆ. ಮುಸ್ಲಿಂ ಮಹಿಳೆಯರೇ ಅವರ ಮತೀಯ ಕಾನೂನುಗಳ ದಬ್ಬಾಳಿಕೆಯ ವಿರುದ್ಧ ಹೋರಾಡುತ್ತಿದ್ದಾರೆ. ಧಾರ್ಮಿಕ ಕಾನೂನಿಗೆ ಬಲಿಯಾಗುವವರೇ ಅದನ್ನು ವಿರೋಧಿಸಿ ನಿಲ್ಲಬೇಕು. ಆಗ ಬದಲಾವಣೆಯ ಪ್ರಕ್ರಿಯೆಗೆ ಒತ್ತು ಬರುತ್ತದೆ. ಯಾವುದೇ

ಧರ್ಮದ ಮತೀಯ ಕಾನೂನಗಳ ಕಾರಣದಿಂದಾಗಿ ಆ ಸಮುದಾಯದ ಮಹಿಳೆಗೆ ಅನ್ಯಾಯವಾಗುತ್ತಿದ್ದರೆ ಅದನ್ನು ಅವರೇ ಪ್ರತಿಭಟಿಸಬೇಕಾಗುತ್ತದೆ. ಅದರ ನಿವಾರಣೆಗೆ ಕೇವಲ ಕಾನೂನು ಮಾಡುವುದರಿಂದ ಯಾವುದೇ ಪರಿಣಾಮ ಆಗುವುದಿಲ್ಲ. ಬದಲಾಗಿ ಹಕ್ಕು ಕೇಳುವ ಪ್ರಜ್ಞೆ ಮಹಿಳೆಯರಲ್ಲಿ ಮೂಡಬೇಕಿದೆ. ಪೂರಕವಾಗಿ ನಿಲ್ಲುವ ಸಾಮಾಜಿಕ ಮನಸ್ಸುಗಳು ಸಿದ್ಧಗೊಳ್ಳಬೇಕಾಗಿದೆ.

**೪.೭. ಸಾಮಾಜಿಕ ಪರಿವರ್ತನೆಗಳು :**

ಬದಲಾವಣೆ ಅಥವಾ ಪರಿವರ್ತನೆಯು ಪ್ರಕೃತಿಯ ಸಹಜವಾದ ನಿಯಮವಾಗಿದೆ. ಅದೊಂದು ಸ್ವಾಭಾವಿಕ ಪ್ರಕ್ರಿಯೆಯಾಗಿದೆ. ಈ ದಿನ ಏನಿದೆಯೋ ಅದು ನಾಳೆ ಪರಿವರ್ತನೆಗೆ ಒಳಗಾಗುತ್ತದೆ. ಒಂದಷ್ಟು ಕಾಲವಧಿಯ ಅಂತರದ ವೀಕ್ಷಣೆಯಲ್ಲಿ ಕಂಡುಬರುವ ವ್ಯತ್ಯಾಸವನ್ನು ಪರಿವರ್ತನೆ ಎಂದು ಕರೆಯುತ್ತೇವೆ. ವ್ಯತ್ಯಾಸವು ಇಂದ್ರಿಯ ಗ್ರಾಹ್ಯವಾದಷ್ಟು ಸ್ವಲ್ಪವಾಗಿರಬಹುದು. ಇಲ್ಲವೇ ಬೃಹತ್ ಪ್ರಮಾಣದ್ದಾಗಿರಬಹುದು. ಹಾಗೆಯೇ ಕಾಲಾವಧಿಯಲ್ಲಿಯೂ ಸಹ ಸೆಕೆಂಡುಗಳ ಅಂತರವಾಗಿರಬಹುದು. ಇಲ್ಲವೇ ದಶಲಕ್ಷ ವರ್ಷಗಳ ಅಂತರವಾಗಿರಬಹುದಾಗಿದೆ.

ಗಿಡಮರಗಳು ಹುಟ್ಟುತ್ತವೆ, ಬೆಳೆಯುತ್ತವೆ; ಕೊನೆಗೆ ಒಣಗಿ ಬೀಳುತ್ತವೆ. ಮಾನವರು ಹುಟ್ಟುತ್ತಾರೆ; ಬೆಳೆಯುತ್ತಾರೆ; ಜೀವನಸಾಗಿಸುತ್ತಾರೆ. ಕೊನೆಗೆ ಅವಸಾನ ಹೊಂದುತ್ತಾರೆ. ನದಿ ಸಾಗರಗಳೂ, ಬೆಟ್ಟ ಅಡವಿಗಳೂ ದೊಡ್ಡ ದೊಡ್ಡ ಪರ್ವತಗಳು ತಮ್ಮ ಸ್ಥಿತಿಗತಿಗಳಲ್ಲಿ ವ್ಯತ್ಯಾಸ ಹೊಂದುತ್ತವೆ. ಇವೆಲ್ಲವುಗಳೂ ಪರಿವರ್ತನೆಗಳೇ ಆಗಿರುವುವು. ಇಂತಹ ಸ್ವಾಭಾವಿಕ ಪರಿವರ್ತನೆಗಳು ಮಾನವ ಜೀವಿತದಲ್ಲಿ, ಅವನ ಪರಿಸರದಲ್ಲಿ ಸತತವಾಗಿ ಆಗುತ್ತಲೇ ಇರುತ್ತವೆ. ಪರಿವರ್ತನೆಯು ಸರ್ವವ್ಯಾಪಿಯಾದುದು. ವಿಶ್ವದಲ್ಲಿ ಪರಿವರ್ತನೆಯಾಗದಿರುವ ವಸ್ತು ಯಾವುದೂ ಇಲ್ಲ. ಕುಟುಂಬ ವ್ಯವಸ್ಥೆ ಮತ್ತು ಧರ್ಮಗಳೂ ಪರಿವರ್ತನೆ ಹೊಂದುತ್ತವೆ. ಮಾನವನ ಸಂಸ್ಕೃತಿ ಮತ್ತು ನಾಗರೀಕತೆಗಳೂ ಕಾಲಕಾಲಕ್ಕೆ ಪರಿವರ್ತನೆಗೊಳ್ಳುತ್ತವೆ. ರಾಷ್ಟ್ರಗಳೂ ಸಹ ಕಾಲಾನುಗತಿಯಲ್ಲಿ ಹೊಸ ಸಿದ್ಧಾಂತಗಳಿಗನುಗುಣವಾಗಿ ಪರಿವರ್ತನೆ ಹೊಂದುತ್ತವೆ. ಆದಿವಾಸಿ ಸಮಾಜಗಳೂ ಪರಿವರ್ತನೆಗೆ ಹೊರತಾಗಿಲ್ಲ. ಕಾಡಿನಲ್ಲಿ ವಾಸಿಸುವ ಜನರು ನಿಧನವಾಗಿ ನಾಡಿಗೆ ಬಂದು ವಾಸಿಸತೊಡಗಿದ್ದಾರೆ. ಮರದ ಪೊಟರೆಗಳಲ್ಲಿ ವಾಸಿಸುವ ಮಾನವ ಮನೆಕಟ್ಟಿ ವಾಸಿಸುತ್ತಿದ್ದಾನೆ. ಈಗಿರುವ ಆಧುನಿಕ ಸಮಾಜವು ಸಹ ಮುಂದಿನ ಹತ್ತಾರು ವರ್ಷಗಳಲ್ಲಿ ಇನ್ನಷ್ಟು ಹೆಚ್ಚಿನ ಪರಿವರ್ತನೆ ಹೊಂದಿದ ಸ್ವರೂಪದ್ದಾಗಿರುತ್ತದೆ.

ಸಮಾಜವು ನಿತ್ಯ ಪರಿವರ್ತನಶೀಲವಾದುದು. ಅದು ಒಂದು ಜೀವಂತ ವ್ಯವಸ್ಥೆ. ಅದು ನಿಂತ ನೀರಿನಂತಿರದೆ ಹರಿಯುತ್ತಿರುವ ಪ್ರವಾಹದಂತಿರುತ್ತದೆ. ಇದಕ್ಕೆ ಕಾರಣ ಮಾನವ ಅಗಾಧ ಬುದ್ಧಿಶಕ್ತಿ, ರಚನಾತ್ಮಕ ಶಕ್ತಿ ಹಾಗೂ ಹೊರಗಿನ ಸಮಾಜಗಳ ಪ್ರಭಾವ. ಸಮಾಜದ ಒಂದು ಕ್ಷೇತ್ರದಲ್ಲಾಗುವ ಪರಿವರ್ತನೆಗಳು ಇತರ ಕ್ಷೇತ್ರಗಳ ಮೇಲೂ ಪ್ರಭಾವ ಬೀರುತ್ತದೆ. ಪ್ರಾಚೀನ ಸಮಾಜಗಳು ತೀರಾ ಸರಳವಾಗಿದ್ದವು. ಆಗ ಪರಿವರ್ತನೆಗೆ ಅವಕಾಶಗಳು ಕಡಿಮೆ ಇದ್ದವು. ಕಾಲಾನು ಕ್ರಮದಲ್ಲಿ ಅದರಲ್ಲೂ ವಿಜ್ಞಾನ ಮತ್ತು ತಾಂತ್ರಿಕ ಜ್ಞಾನಗಳ ಬೆಳವಣಿಗೆಯಿಂದಾಗಿ ಆಧುನಿಕ ಸಮಾಜದಲ್ಲಿ ತೀವ್ರತರ ಪರಿವರ್ತನೆಗಳಾಗುತ್ತವೆ. ಇದು ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಪರಿವರ್ತನೆಗಳಾಗುತ್ತಿವೆ. ಶಿಕ್ಷಣ, ಸಂಪ್ರದಾಯ, ಆಚಾರ, ವಿಚಾರ, ನೀತಿ, ನಿಯಮಗಳು, ಊಟೋಪಚಾರ ಮದುವೆ ಮುಂತಾದ ಕ್ಷೇತ್ರಗಳಲ್ಲಿ ಪರಿವರ್ತನೆಗಳಾಗುತ್ತಿವೆ. ತನ್ಮೂಲಕ ಸಾಮಾಜಿಕ ಬದಲಾವಣೆ ಅಥವಾ ಪರಿವರ್ತನೆ ಸಂಭವಿಸುತ್ತವೆ.

ಹೆಚ್.ಜಿ. ಮಜುಂದರ್ ಅವರ ಪ್ರಕಾರ "ಜನರ ಜೀವನದಲ್ಲಿ ಇಲ್ಲವೇ ಸಮಾಜದ ಕ್ರಿಯೆಯಲ್ಲಿ ಹಳೆಯದನ್ನು ತೆಗೆದು ಹೊಸದನ್ನು ಅಳವಡಿಸುವ ಇಲ್ಲವೇ ಮಾರ್ಪಡಿಸುವ ನೂತನ ಶೋಭಾಚಾರ ಅಥವಾ ವಿಧಾನಕ್ಕೆ ಸಮಾಜಿಕ ಪರಿವರ್ತನೆ ಎಂದು ಹೇಳಬಹುದು"[೬೬]

ಪಾಶ್ಚಿಮಾತ್ಯರ ಸಂಪರ್ಕ, ಶಿಕ್ಷಣ, ಜಾಗತೀಕರಣದ ಪ್ರಭಾವದಿಂದಾಗಿ ಸಮಾಜದಲ್ಲಿ ತೀವ್ರತರದ ಪರಿವರ್ತನೆಗಳಾದವು ಇದು ಸಾಹಿತ್ಯ ಕ್ಷೇತ್ರವನ್ನು ಸಹ ಬಿಡಲಿಲ್ಲ. ಪರಿವರ್ತನೆಯ ಅನೇಕ ಚಿತ್ರಣಗಳನ್ನು ಫಕೀರ್ ಮುಹಮ್ಮದ್ ಕಟ್ಪಾಡಿಯವರ ಕಾದಂಬರಿಯಲ್ಲಿ ಕಾಣಬಹುದು.

ಕಟ್ಪಾಡಿ ಅವರ 'ಸರಕುಗಳು' ಕಾದಂಬರಿಯಲ್ಲಿ ಇಸ್ಲಾಂ ಧರ್ಮದ ಪ್ರಕಾರ ವ್ಯಭಿಚಾರ ನಿಶಿದ್ಧ. ಅರಬ್ ರಾಷ್ಟ್ರಗಳಲ್ಲಂತೂ ಈ ಬಗ್ಗೆ ಕ್ರೂರ ಕಾನೂನುಗಳುಂಟು. ಧರ್ಮ ಸಮ್ಮತ 'ನಿಕಾಹ್' ಆಗದೆ ಹುಡುಗಿಯ ಮೈ ಮುಟ್ಟುವಂತಿಲ್ಲ. ಆದರೆ ಆ ರಾಷ್ಟ್ರಗಳಲ್ಲಿ 'ನಿಕಾಹ್' ಆಗುವುದು ಗಂಡುಗಳಿಗೆ ಬಲು ದುಬಾರಿ ಸುಖ. ಲಕ್ಷಗಟ್ಟಲೆಯಲ್ಲಿ 'ಮಹರ್' ಸುರಿಸದೆ ಹೆಣ್ಣುಸಿಗದು. ಆದ್ದರಿಂದ ಭಾರತದಂತಹ ಬಡ ರಾಷ್ಟ್ರದ ಮುಸ್ಲಿಂ ಹೆಣ್ಣುಗಳನ್ನು ಅರಬಿಗಳು ಮರದ ವ್ಯಾಪಾರದ ಸೋಗಿನಲ್ಲಿ ಬಂದು ಸುಲಭವಾಗಿ ಕೆಲವೇ ದಿನಗಳಿಗೆ 'ನಿಕಾಹ್' ಆಗುತ್ತಾರೆ. ಆದರೆ ಮತ್ತೊಂದು ದುರಂತವೆಂದರೆ ತಾಯಿಯನ್ನೇ 'ನಿಕಾಹ್' ಆದ ಅರಬಿ, ಮಗಳನ್ನು 'ನಿಕಾಹ್' ಆಗುವ ಸನ್ನಿವೇಶ 'ಸರಕುಗಳು' ಕಾದಂಬರಿಯಲ್ಲಿ ಕಂಡು ಬರುತ್ತದೆ. ಹಾಜಿಮಾಳ ಮಗಳಾದ ನಫೀಸಾಳನ್ನು ಐದು ಸಾವಿರ ರೂಪಾಯಿಗಳಿಗೆ ಅಚ್ಚುಕೋಯ ಮುದುಕ ಅರಬಿಯೊಡನೆ ನಿಕಾಹ್ ಮಾಡಲು ಒಪ್ಪಿಸುತ್ತಾನೆ. ಮುಸ್ಲಿಂ ಯುವಕ ಸಂಘ ಹಾಗೂ ಪೋಲಿಸರ ಉಪದ್ರವದಿಂದ

ತಪ್ಪಿಸಿಕೊಳ್ಳಲು ಅಚ್ಚುಕೋಯ ಹಾಜೀಮಾಳ ಮನೆಗೆ ರಾತ್ರಿ ಹನ್ನೆರಡು ಗಂಟೆಯ ಹೊತ್ತಿಗೆ ಬರುತ್ತಾನೆ. ನಫೀಸಾಳ ಅಣ್ಣ ಮುಮ್ಮಟಿ ಶಾಸ್ತ್ರೋಕ್ತವಾಗಿ ನಿಕಾಹ್‌ದ ಕಾರ್ಯಗಳನ್ನು ಮಾಡುತ್ತಿದ್ದಾಗ ಹಾಜಿಮಾ ಒಳಗಿನಿಂದ ಇಣುಕಿ ನೋಡುತ್ತಿದ್ದವಳು ಹಾಗೆ ಚಿಟ್ಟನೆ ಚೀರಿದಳು. “ಈ ನಿಕಾಹ್ ನಿಲ್ಸೀ.... ಇವ್ನು ನನ್ನ ಗಂಡ.... ಇವ್ನು ನನ್ನನ್ನು ನಿಕಾಹ್ ಆದವ್ನು, ನನ್ನ ನಫೀಸಾಳ ಖಾಸ ತಂದೆ... ಎಂದಳು. ಗಟ್ಟಿಯಾಗಿ ಆಗ ನಫೀಸಾ ನಗುತ್ತಲೇ ಹೇಳಿದ್ಲು; ಅಮ್ಮ ನಿಂಗೆಲ್ಲೋ ಬ್ರಾಂತಿ... ತಂದೆಯಾದರೇನಂತೆ? ನೀವೆಲ್ಲ ಮದುವೆಯಾದ ಅರಬರಲ್ಲಿ ನಿಮ್ಮ ಅಪ್ಪಂದಿರು ಇದ್ದಿರಲಿಲ್ವಾ ಅನ್ನೂ ಗ್ಯಾರೆಂಟಿಯೇನು?”೬೭ ಎನ್ನುವ ಅವಳ ಮಾತಿನ ವ್ಯಂಗ್ಯವನ್ನು ಗುರುತಿಸಬಹುದು.

ಅರಬರು ಭಾರತೀಯ ಕಡಲತೀರದ ಬಡ ಮುಸ್ಲಿಂ ಹೆಣ್ಣುಗಳನ್ನು ಕೇವಲ ಸರಕುಗಳಂತೆ ಅಂದರೆ ವಸ್ತುಗಳಂತೆ ನೋಡುವುದು ಮೇಲಿನ ಸಂದರ್ಭದಲ್ಲೇ ಗೋಚರಿಸುತ್ತದೆ. ಸಂಬಂಧಗಳಿಗೆ ಬೆಲೆ ಇರದ ಅರಬ್ ನಿಕಾಹ್‌ಗಳು ನಫೀಸಾಳಂಥ ಮುಗ್ಧ ಹೆಣ್ಣಿನ ಬಾಳನ್ನು ದುರಂತಕ್ಕೆ ನೂಕುತ್ತವೆ.

ಅಲ್ಲದೆ ದಲ್ಲಾಳಿ ಅಚ್ಚುಕೋಯ “ನೋಡು ಹಾಜಿಮ, ಈ ಹಣ ಮತ್ತೊಂದು ಹತ್ತು ಸಾವಿರ ನಾನು ಹಿಂದೆ ಕೊಟ್ಟಿದ್ದು, ಎಲ್ಲಾ ಸೇರಿ ಒಟ್ಟು ಹದಿನೈದು ಸಾವಿರ ರೂಪಾಯಿ ನಫೀಸಾಳ ಹೆಸರಿನಲ್ಲಿ ಬ್ಯಾಂಕಿನಲ್ಲಿಡಬೇಕಂತ ತೀರ್ಮಾನ ಮಾಡಿದ್ದೇವೆ. ಒಂದು ಒಳ್ಳೆಯ ಹುಡುಗನನ್ನು ಹುಡುಕಿ ಅವಳಿಗೆ ಮದುವೆ ಮಾಡಿಸಿಕೊಡಬೇಕು”೬೮ ಎನ್ನುವಲ್ಲಿ ಬದಲಾದ ಕಾಲಘಟ್ಟ ಹೇಗೆ ‘ಕುಟ್ಟಿಚ್ಚಿರಾ’ದ ಕಡಲತೀರದ ಹೆಣ್ಣುಗಳ ಬಾಳಿಗೆ ಒಂದು ಆಶಾಕಿರಣವಾಗಿ ಲಭಿಸಿದೆ ಎಂಬುದನ್ನು ಧ್ವನಿಸುತ್ತದೆ. ಸಲೀಮ್ ತಾನಾಗಿಯೇ ನಫೀಸಳನ್ನು ಮದುವೆಯಾಗುತ್ತೇನೆ ಎಂದಾಗ ಅವಳು “ಸಲೀಮ್ ನೀವು ನನ್ನನ್ನು ಮದುವೆಯಾಗುವುದಾದರೆ ಕದ್ದು ಮುಚ್ಚಿ ಗುಟ್ಟಿನಲ್ಲಿ ಆಗಕೂಡದು. ಬಹಿರಂಗವಾಗಿ ಎಲ್ಲ ಸಾಮಾನ್ಯ ಮದುವೆಗಳು ನಡೆಯುವಂತೆಯೇ ನಡೆಯಬೇಕು. ಎಲ್ಲರೂ ನೋಡಬೇಕು, ಗುಡಿಸಲುಗೇರಿಯ ಹೆಣ್ಣು ನಾನು ಎಲ್ಲ ಗೌರವದೊಂದಿಗೆ, ನಿಮ್ಮೊಂದಿಗೆ ನಿಕಾಹ್ ಆಗಿರಬೇಕು. ಇದನ್ನು ನೀವು ನಡೆಸಿಕೊಡುವುದಾದರೆ ನಿಮ್ಮೊಂದಿಗೆ ತುಂಬಾ ಸಂತೋಷದಿಂದ ನಿಕಾಹ್ ಆಗೋದಕ್ಕೆ ಒಪ್ಪಿಗೆ ನೀಡುತ್ತೇನೆ”೬೯ ಎನ್ನುತ್ತಾಳೆ. ಸಾಮಾಜಿಕವಾಗಿ ಇದುವರೆಗೂ ಕೆಳಮಟ್ಟದಿಂದ ನೋಡುವ ದೃಷ್ಟಿಕೋನ ಹೋಗಬೇಕು. ಎಲ್ಲರಂತೆ ಸ್ವಾಭಿಮಾನಿಯಾಗಿ ಬದುಕುವಂತಹ ಅವಕಾಶ ಬೇಕು ಎಂದು ಹೇಳುವಲ್ಲಿ ನಫೀಸಾಳ ಸ್ತ್ರೀ ಸ್ವಾತಂತ್ರ್ಯ ಸಮಾನತೆಯ ಅಭೀಪ್ಸೆಯಿದೆ. ಕಟ್ಟಾಡಿಯವರ ಕಾದಂಬರಿಯು ಮೇಲಿನ ವಿಷಯಗಳಿಗೆ ಮಾತ್ರವಷ್ಟೇ ಸೀಮಿತವಾಗಿರದೇ ಕುಟ್ಟಿಚ್ಚಿರಾದ ವಿಶಿಷ್ಟ ಕುಟುಂಬ ಪದ್ಧತಿಯಲ್ಲಿಯೂ ಕೂಡ ಪರಿವರ್ತನೆಯ ಗಾಳಿ ಬೀಸತೊಡಗಿದೆ.

ಇಲ್ಲಿಯದ್ದು ಒಂದು ಬಗೆಯ ಪಿತೃಪ್ರಧಾನ ಅದಿಕಾರವುಳ್ಳ ಮಾತೃಪ್ರಧಾನ ಸಂಸ್ಕೃತಿಯ ಬದುಕು ಇಲ್ಲಿಯದು ಇಲ್ಲಿ 'ಕೊಟ್ಟ ಗಂಡು ಕುಲಕ್ಕೆ ಹೊರಗೆ' ಆದರೆ ದುಡಿಮೆ ನಿರ್ವಹಣೆ ಎಲ್ಲದರ ಜವಾಬ್ದಾರಿ ಮಾತ್ರ ಆತನದು.

ಸೈದುಕೋಯಾರದ್ದು ದೊಡ್ಡಮನೆ ಆಸ್ತಿಯು ತುಂಬಾ ಇತ್ತು. ಮದುವೆಯಾದ ಹೆಣ್ಣು ಮಕ್ಕಳಿಗೆಲ್ಲ ಸಂಪ್ರದಾಯದಂತೆ ಮೂರು ಕೋಣೆಗಳನ್ನು ಕಟ್ಟಿಸಿಕೊಡುವುದರ ಬದಲಿಗೆ ಮೂರು ಒಳ್ಳೆಯ ಮನೆಗಳನ್ನು ಕಟ್ಟಿಸಿಕೊಟ್ಟಿದ್ದರು. ಮದುವೆಯಾದ ನಂತರ ತಮ್ಮ ಮನೆಯ ಹೆಣ್ಣುಮಕ್ಕಳು ತಾಯಿಯ ಮನೆಯಲ್ಲಿಯೇ ಇರಬೇಕಾದುದು 'ಕೋಯಾ' ಮನೆತನದ ಸಂಪ್ರದಾಯ ಅವರ ಗಂಡಂದಿರು ಅನುದಿನವೂ ಬಂದು ರಾತ್ರಿ ಕಳೆದು ಬೆಳಗಾಗುವುದರೊಳಗೆ ಹೋಗಬೇಕಾಗಿತ್ತು.

ಆದರೆ ಸಲೀಮ್ ಮನೆತನದ ಸಂಪ್ರದಾಯದಂತೆ ಅತ್ತೆ ಮೆನೆಗೆ ಸಂಜೆ ಹೋಗಿ ಬೆಳಗ್ಗಿನ ಜಾವ ಬರುತ್ತಿದ್ದವನು. ಒಂದು ದಿನ "ಅಮ್ಮ... ನಾವ್ಯಾಕೆ ಅವಳನ್ನು ಇಲ್ಲಿಗೆ ಕರೆತರಬಾರದು? ಅಲ್ಲಿಗೆ ಸಂಜೆ ಹೋಗೋದು ಬೆಳ್ಳಿಗ್ಗೆ ಬರೋದೆಲ್ಲ ರಗಳೆ... ನಂಗಿಷ್ಟವಿಲ್ಲ"[೭೦] ಎಂದು ತನ್ನ ತಾಯಿಗೆ ಹೇಳಿದನು. ಆಗ ತಾಯಿ ನಿನ್ನ ಹೆಂಡತಿಗೆ ಹೇಳು ಅವಳು ಇಲ್ಲಿ ಇರಲಿಕ್ಕೆ ಒಪ್ಪಿದರೆ ನಮ್ಮದೇನೂ ಅಭ್ಯಂತರವಿಲ್ಲ ಎಂದಳು. ಒಂದು ದಿನ ಸಲೀಮ್ ರಾತ್ರಿ ತನ್ನ ಹೆಂಡತಿಗೆ "ನೀನು ಇಲ್ಲಿರೋದು ನಾನು ದಿನಾ ಇಲ್ಲಿಗೆ ಬಂದು ಹೋಗೊದು ಯಾಕೋ ನಂಗಿಷ್ಟವಿಲ್ಲ. ಆದ್ದರಿಂದ ನೀನು ನಮ್ಮ ಮನೆಯಲ್ಲಿಯೆ ಬಂದು ಇರಬೇಕು ಎಂದು ಹೇಳುವ ಮೂಲಕ ತನ್ನ ತಲೆತಲಾಂತರದಿಂದ ಬಂದ ಕುಟುಂಬ ಪದ್ಧತಿ ಮತ್ತು ಸಂಪ್ರದಾಯವನ್ನು ಮುರಿಯುವುದರ ಮೂಲಕ ಪರಿವರ್ತನೆಗಳಾಗುತ್ತವೆ ಎಂದು ಹೇಳಬಹುದು.

ದೊಡ್ಡ ಮನೆಯ ಕೋಯಾ ತರವಾಡು ಹಲೀಮಾಬೀಯದು ಇಲ್ಲಿ ಇಪ್ಪತ್ತೇಳು ಕುಟುಂಬಗಳು. ಒಂದೇ ಸೂರಿನಡಿಯಲ್ಲಿ ವಾಸಿಸುತ್ತಿದ್ದವು. ಈ ಕುಟುಂಬದಲ್ಲಿ ಹೆಚ್ಚು ಕಡಿಮೆ ಇನ್ನೂರು ಜನ ಒಂದೇ ಸೂರಿನಡಿಯಲ್ಲಿ ವಾಸಿಸುತ್ತಿದ್ದರು. ತನ್ನ ತಮ್ಮ ಸಾಕ್ಷರನಾದ ಕಾರಣ ಅಜೀಜ್ ಮದುವೆಯಾದ ನಂತರದಲ್ಲಿ ತನ್ನ ತಾಯಿಯೊಂದಿಗೆ "ನಂಗೆ ಹೆಂಡ್ತಿ ಮನೆಗೆ ಹೋಗಿ ಇರೋದು ಇಷ್ಟವಿಲ್ಲಮ್ಮಾ ಇದೆಲ್ಲಾ ಎಂಥ ಸುಡುಗಾಡು ಸಂಪ್ರದಾಯ? ನಾನು ಬೇರೆ ಮನೆ ಮಾಡ್ತೇನೆ"[೭೧] ಎನ್ನುವ ಮೂಲಕ ಅಧುನಿಕೆಯ ಪ್ರಭಾವಕ್ಕೆ ಒಳಗಾಗ್ಗಿ ಮದುವೆಯಾದ ವರ್ಷದೊಳಗೆ ಬಾಡಿಗೆ ಮನೆಮಾಡಿ ಬೇರೆಯಾದ. ಹೀಗೆ ಸ್ವತಂತ್ರವಾಗಿ ಬದುಕಬೇಕು ಎಂಬ ಆಸೆಯುಳ್ಳವಾಗಿದನು. ಹಲೀಮಾಬಿ ಅತೀಯಾಗಿ ಸಂಪ್ರದಾಯ ಶರಣಳಾಗಿರೋದು ಮಮ್ಮುಟಿಗೆ ಇಷ್ಟವಿರಲಿಲ್ಲ. ಒಮ್ಮೆ ತನ್ನ ಮನೆತನದ ಗೌರವದ ಬಗ್ಗೆ ಹಲೀಮಾಬಿ ಮಾತನಾಡಿದಾಗ ಮಮ್ಮುಟಿ ರೇಗಿ " ಈ

ದರಿದ್ರ ಸಂಪ್ರದಾಯಕ್ಕೂ ಸೂಳೆ ಮನೆಗೆ ಹೋಗಿ ನಸುಕಿನಲ್ಲಿ ಓಡಿ ಬರುವ ವಿಟನಿಗೂ ಏನು ವ್ಯತ್ಯಾಸವಿದೆ ಹೇಳು?"[೨೨] ಎಂದು ರೇಗಿಸುತ್ತಿದ್ದನು.

ಮಮ್ಮುಟ್ಟಿ ಕೂಡ ಕೋಯಾ ಮನೆತನಕ್ಕೆ ಸೇರಿದವನಾಗಿದ್ದರೂ ಹಾಗೆ ಹೇಳಲು ಕಾರಣವಿತ್ತು. ಅವನು ಹುಟ್ಟಿದ ಗುಡಿಸಲು ಕೇರಿಯ ಜನ ಈ ತರದ ಸಂಪ್ರದಾಯಗಳನ್ನು ಎಂದೋ ಮುರಿದಿದ್ದರು. ಈ ಸಂಪ್ರದಾಯಗಳು ಹೊಟ್ಟೆಯನ್ನು ತುಂಬಿಸುವುದಿಲ್ಲ ಎಂಬುದನ್ನು ಅವನು ಕಂಡುಕೊಂಡಿದ್ದ. ಹೀಗೆ ಕುಟುಂಬಗಳು ಸಂಪ್ರದಾಯಗಳು ಆಧುನಿಕ ಶಿಕ್ಷಣ, ಪಾಶ್ಚಿಮಾತ್ಯರ ಸಂಪರ್ಕ, ಅರಬ್ಬರ ಸಂಪರ್ಕಗಳ ಪ್ರಭಾವ ಸಮಾಜದಲ್ಲಿ ತೀವ್ರತರದ ಪರಿವರ್ತನೆಗಳಾದವು.

ಕಟ್ಪಾಡಿಯವರ 'ಕಚ್ಚಾದ' ಕಾದಂಬರಿಯಲ್ಲಿ ಸೂಫೀ ಬ್ಯಾರಿಯು ಮದುವೆಯಾದ ಹೊಸದರಲ್ಲಿ ಹೆಂಡತಿ ಕಚ್ಚಾದಳಿಗೆ ಬಾಡಿ, ಲಂಗ ತಂದು ಕೊಟ್ಟದ್ದಕ್ಕಾಗಿ ಅವಳ ಅತ್ತೆ ಕೆಂಡ ಮಂಡಲವಾಗಿ ಕೂಗಾಡಿದಳು. "ನಿನ್ನ ಹೆಂಡ್ತಿಯನ್ನು ಬೆಳ್ಳಕಾರರ ಲೇಡಿ ಮಾಡುತ್ತಿಯೇನೋ ನನ್ನ ಮಗನೆ? ಈ ಲಂಗ, ಬಾಡೀಸ್ ಹಾಕ್ಲಿಕ್ಕೆ ಶುರು ಮಾಡಿ ಜಹನ್ನುಂ ನರಕಕ್ಕೆ ದಾಖಲು ಮಾಡ್ತಿಯಾ? ನನ್ನ ಮನೆತನದ ಹುಡಿಗೀರೆಲ್ಲ ಇವ್ಳ ಹಾಗೆ ವೇಷ ಕಟ್ಟೊದಕ್ಕೆ ಸುರು ಮಾಡಿದರೆ. ಅವ್ರನ್ನು ಮದ್ವೆ ಆಗೋದಕ್ಕೆ ಯಾರು ಬಂದಾರೋ..."[೨೩]

ಮುಸ್ಲಿಂ ಹೆಣ್ಣು ಸೀರೆಯ ಒಲಗೆ ಲಂಗ, ಬ್ಲೌಸಿನೊಳಗೆ ಬಾಡಿ ತೊಡುವುದು ಇವೆಲ್ಲ ಆಧುನಿಕತೆಯ ಪ್ರಭಾವದಿಂದ ಸಮಾಜದಲ್ಲಿ ಪರಿವರ್ತನೆಗಳಾದವು. ಇದಕ್ಕೆ ನಿದರ್ಶನವಾಗಿ ಸಾರಾ ಅವರ ಚಪ್ಪಲಿಗಳು ಕಥೆಯಲ್ಲಿ "ಅಷ್ಟು ಗಂಡಸರ ಮಧ್ಯೆ ವಿಮಾನ ನಿಲ್ದಾಣಕ್ಕೆ ಬರುವುದೇ? ಮಾನ ಮರ್ಯಾದೆ ಎಲ್ಲ ಬಿಟ್ಟು ಬಿಟ್ಟವಳೆ?"[೨೪] ಆದರೆ ಶಭೀರ ಆಧುನಿಕತೆಯ ಪ್ರಭಾವದಿಂದಾಗಿ ಸಮೀರಾಳನ್ನು ಸಿನಿಮಾ, ಪಟ್ಟಣಕ್ಕೆ ಕರೆದು ಕೊಂಡು ಹೋಗುತ್ತಾನೆ.

'ಕಚ್ಚಾದ'ಳು ಸಂಪ್ರದಾಯಿಕವಾಗಿ ಕೃಷಿಯಲ್ಲಿ ಕೂಲಿ ಮಾಡಿಕೊಂಡು ಬಂದಿರುತ್ತಾಳೆ. ಆದರೆ ಮಗ ಅಲಿಯಬ್ಬ ಆಟೋರಿಕ್ಷಾ ಓಡಿಸುತ್ತಾನೆ. ಹೀಗೆ ಆಧುನಿಕತೆಯ ಪ್ರಭಾವದಿಂದಾಗಿ, ಶಿಕ್ಷಣವನ್ನು ಪಡೆದ ಪರಿಣಾಮವಾಗಿ ಸಮಾಜದಲ್ಲಿ ತೀವ್ರತರದ ಪರಿವರ್ತನೆಗಳಾದವು.

### ೪.೮. ವರ್ಗತಾರತಮ್ಯ :

ಫಕೀರ್ ಮುಹಮ್ಮದ್ ಕಟ್ಪಾಡಿ ಅವರ 'ಸರಕುಗಳು' ಕಾದಂಬರಿಯಲ್ಲಿ ಭಾರತದಂತಹ ರಾಷ್ಟ್ರಗಳು ಬಡ ಅರಬಿಗಳಿಗೆ ಅಗ್ಗದ ಮಾವನ ಮನೆಗಳಂತೆ ಚಿತ್ರಣವಿದೆ. ಮರದ ವ್ಯಾಪಾರದ ಸೋಗಿನಲ್ಲಿ 'ಮಚ್ಚೆ' ಹತ್ತಿ ಕುಟ್ಟಿಚ್ಚಿರಾದ ಕಡಲ ಕರೆ ತಲುಪಿದರಾಯಿತು. ಅವರ ತುದಿಗಾಲು ಭಾರತದ ನೆಲ ಸೋಕುತ್ತಿರುವಂತೆಯೇ ಆ ರಾತ್ರಿ ಅವರ ಜೊತೆ 'ನಿಕಾಹ್'(ಹೆಂಗಸರಿಗೆ ಮಾತ್ರ)

ಆಗಲಿರುವ ಹೆಣ್ಣಿನ ವಿವರಗಳನ್ನು ಅಚ್ಚುಕೋಯನಂಥ ದಲ್ಲಾಳಿ ಅವರಿಗೆ ತಲುಪಿಸಿರುತ್ತಾನೆ. ಬಡ ಮುಸ್ಲಿಂ ಹೆಣ್ಣು ಮಕ್ಕಳನ್ನು ಅರಬಿಗಳು ವಾರಗಟ್ಟಲೆ ಬಳಸಿ ಉಳಿಸಿ ಹೋದ 'ಸರಕುಗಳು' ಆ ಹೆಣ್ಣು ಮಕ್ಕಳು ಮತ್ತೆ ತಮ್ಮ ಗುಡಿಸಲು ಸೇರುತ್ತಾರೆ. ಗಂಡಸರ ಆಶ್ರಯವಿಲ್ಲದಿರುವುದರಿಂದ ಮಕ್ಕಳನ್ನು ಸಾಕುವ ಹೊಣೆಗಾರಿಕೆ ಹೊತ್ತು ಹೋರಾಟದ ಬದುಕಿನಿಂದಾಗಿ ದಿಕ್ಕುತಪ್ಪಿದ ಪರದೇಶಿಗಳಂತೆ ಬದುಕಬೇಕಾಗುತ್ತದೆ. ನಫೀಸಾಳ ತಾಯಿ ಹಾಜಿಮಾಳ ಬದುಕೂ ಇಂಥದ್ದೆ. ಈ ಕೇರಿಯ ಹೆಂಗಸರೆಲ್ಲ ಅರಬರ ಸೂಳೆಗಳೆಂದೇ ಪುಕಾರು ಹಬ್ಬಿರುವುದರಿಂದ ಕೀಳರಿಮೆಗೆ ಆಕೆ ಗುರಿಯಾಗುತ್ತಾಳೆ. ವಯಸ್ಸಾದ ಮೇಲೆ ಅವರಿವರ ಮನೆಯಲ್ಲಿ ಮನೆಚಾಕರಿ ಮಾಡಿಕೊಂಡು ಕುಟುಂಬ ನಿರ್ವಹಣೆ ಮಾಡುತ್ತಾಳೆ.

ಇಂತಹ 'ನಿಕಾಹ್'ಗಳನ್ನು ನಿಲ್ಲಿಸಬೇಕೆಂದು ಮುಸ್ಲಿಂ ಯುವಕ ಸಂಘದವರಾದ ಇಸ್ಮಾಲಿ, ಕೋಯಾಲಿ, ಯೂಸೂಫ್, ನಜೀರ್ ಆಲಿ, ಅದ್ರಮಾನ್, ರಹೀಮ್ ಮೊದಲಾದ ಬಿಸಿರಕ್ತದ ಯುವರಕು ಸಭೆಸೇರುತ್ತಾರೆ. ಶನಿವಾರದಂದು ಚಳುವಳಿ ಪ್ರಾರಂಭಿಸುವ ಸಂಬಂಧವಾಗಿ ಕರಪತ್ರ, ಬ್ಯಾನರು ಮುಂತಾದ ಸಿದ್ಧತೆಗಳನ್ನು ಮಾಡಿಕೊಂಡರು. "ಇಪ್ಪತ್ತು, ಮೂವತ್ತು ಯುವಕರು ಉತ್ಸಾಹದಿಂದ ಘೋಷಣೆಗಳನ್ನು ಕೂಗುತ್ ಹೊರಟರು, ಕೆಲವರು ಕೈಯಲ್ಲಿ 'ನಮ್ಮ ಹೆಣ್ಣಮಕ್ಕಳು ಮಾರಾಟದ ವಸ್ತುಗಳಲ್ಲ... ಅರಬಿ ವ್ಯಭಿಚಾರಿಗಳಿಗೆ ಧಿಕ್ಕಾರ...' 'ಮದುವೆಯಾಗುವುದಾದರೆ ಮುಸ್ಲಿಂ ಶರಿಯತ್ತಿನ ನಿಯಮದಂತೆ ಆಗಿರಿ.."[೭೫] ಎಂಬ ಘೋಷಣಾ ಫಲಕಗಳನ್ನು ಹಿಡಿದುಕೊಂಡಿದ್ದರು. ಬಹುಕಾಲದಿಂದ ನಡೆದು ಬಂದ ವಿವಾಹ ವ್ಯಾಪಾರವನ್ನು ಒಂದು ವರ್ಷದ ಮಟ್ಟಿಗೆ ನಿಲ್ಲಿಸುವಲ್ಲಿ ಚಳುವಳಿ ಯಶಸ್ವಿಯಾಯಿತು. ಇದರಿಂದ ಹೆಚ್ಚು ಹೆಚ್ಚು ಜನ ಹಸಿವು ತಾಳಲಾರದೆ ಭಿಕ್ಷೆ, ಹಾದರ, ಕಳ್ಳತನಗಳಲ್ಲಿ ತೊಡಗಿದರು. ಕೂಲಿ ಕೆಲಸಕ್ಕಾಗಿ ಊರಿಡೀ ಸುತ್ತಿದರೂ, ಕೆಲಸ ಸಿಗಲಿಲ್ಲ. ಚೆಯ್ಯಾಮ್ಮಳ ಮಗಳು ಪೂನ್ನಿವೂಳಿ ತನ್ನೆರಡು ಮಕ್ಕಳ ಹಸಿವನ್ನು ನೀಗಿಸಲು ವೇಶ್ಯಾವೃತ್ತಿಗೆ ಇಳಿಯುವುದು ಅನಿವಾರ್ಯವಾಗುತ್ತದೆ. ಮುಸ್ಲಿಂ ಯುವಕ ಸಂಘಗಳು ನಡೆಸುವ ಚಳುವಳಿಯಿಂದ ಇಂಥ ಗುಡಿಸಲು ಜನರ ಬದುಕೇನೂ ಸುಧಾರಿಸುವುದಿಲ್ಲ ಎಂಬ ಹಾಜಿಮಾಳ ಮಾತುಗಳು ಹೀಗಿವೆ. "ಯಾವೋನವ್ನು ನಮ್ಮ ಹೊಟ್ಟೆಗೆ ಹೊಡ್ದು ನಮ್ಮನ್ನೆಲ್ಲಾ ಅನ್ನ ನೀರಿಲ್ಲದೆ ಕೊಲ್ಲಬೇಕಂತ ಹೊರಟಿರೋ ಕೊಲೆಗಾರ.... ಅರಬಿಗಳನ್ನು ಮದುವೆಯಾಗೋದನ್ನು ನಾವು ನಿಲ್ಲಿಸ್ತೇವೆ. ನಮಗೆ ದಿನಾ ಅನ್ನ ಹಾಕ್ತಿಯಾ ನೀನು? ನನ್ನ ಮಗಳನ್ನು ಮದುವೆಯಾಗ್ತಿಯಾ? ನಾನು, ನಮ್ಮಮ್ಮ, ನಮ್ಮಜ್ಜ ಎಲ್ಲ ಹುಟ್ಟಿದ್ದು ಅರಬರಿಗೇ. ನಾವು ಬೇಕಿದ್ರೆ ನೀವು ಹೇಳಿದ ಹಾಗೆ ಅರಬರನ್ನು ಮದ್ವೆ ಆಗೋಸು ಬಿಟ್ಟು ಬಿಡ್ತೇವೆ ಆದ್ರೆ ನಮ್ಮ ಹೊಟ್ಟೆ ಹಸೀತದಲ್ಲಾ?

ಅದನ್ನು ತಣಿಸೋದಕ್ಕೆ ಯಾವ ದಾರಿಯುಂಟು ಹೇಳಿ...? ನಮ್ಮ ಮನೇಲಿ ಹೆಣ್ಣು ಮಕ್ಕಳಿದ್ದಾವಲ್ಲಾ... ಅವುನ್ನ ನಿಮ್ಮಂಥ ಮರ್ಯಾದಸ್ತರು ಸೇರ್ಕೊಂಡು ಹಾದರಕ್ಕುಟ್ಟದೋರಂತ ದೂರ ಮಾಡ್ತೀರಲ್ಲಾ! ನೋಡೋಣ ನಮ್ಮ ಹೆಣ್ಣು ಮಕ್ಕಳನ್ನು ನಿಮ್ಮಲ್ಲಿ ಯಾರೆಲ್ಲ ಮದುವೆಯಾಗ್ಲಿಕ್ಕೆ ತಯಾರಾಗಿದ್ದೀರಿ... ಹೇಳಿ...? ನಮ್ಮ ಈ ಪ್ರಶ್ನೆಗೆ ಉತ್ತರ ಕೊಡಿ"[೭೬] ಎಲ್ಲಾ ರೀತಿಯ ಮಾನಸಿಕ, ಲೈಂಗಿಕ ಶೋಷಣೆ ಮತ್ತು ದೌರ್ಜನ್ಯಕ್ಕೆ ಒಳಗಾಗುವವರು ಕೆಳವರ್ಗದ ಕೆಳಜಾತಿಯ ಮುಸ್ಲಿಂ ಮಹಿಳೆಯರು. "ತಮ್ಮ ನಾಡಿನಲ್ಲಿ 'ಮಹರ್' ನೀಡಲಾಗದೆ. ಮದುವೆಗಾಗಿ ಕಾತರಿಸುವ ಅರಬಿಗಂಡುಗಳು ಒಂದು ಕಡೆಯಾದರೆ, ಇಲ್ಲಿ ವರದಕ್ಷಿಣೆ ಕಾಟದಿಂದಾಗಿ ಮದುವೆ ಬಗ್ಗೆ ಕನವರಿಸಲೂ ಭಯಪಡುವ ಹೆಣ್ಣುಗಳು ಇನ್ನೊಂದು ಕಥೆ ಈ ಹೋರಾಟದಲ್ಲಿ ಯಾರು ಗೆದ್ದರು, ಯಾರು ಸೋತರು ಎಂಬುದಾಗಲೀ ಯಾರು ಸರಿ, ಯಾರು ತಪ್ಪು ಎಂಬುದಾಗಲೀ ಮುಖ್ಯವಲ್ಲ. ತಾವೇ ರೂಪಿಸಿದ 'ವ್ಯವಸ್ಥೆಯ' ಸೂತ್ರದಲ್ಲಿ ತಾವೇ ಬಂಧಿಯಾದವರು ಈ ಎಲ್ಲರೂ"[೭೭] ಇದರಿಂದ ಹೊರಬರಲು ಪ್ರಯತ್ನಿಸಿದರೆ ಅದು ಪಡೆದುಕೊಳ್ಳುವ ಆಯಾಮಗಳನ್ನು ಈ ಮೊದಲೇ ಚರ್ಚೆಯಾಗಿದೆ.

ಗ್ರಾಮ ನೆಲೆಯ ಬಡಮುಸ್ಲಿಂ ಮಹಿಳೆಯರು ಮಾನವ ಹಕ್ಕುಗಳ ನೆಲೆಯ ಆಚೆಯೇ ಉಳಿದು ಬಿಡುತ್ತಾರೆ. "ಜಾತೀಕ ಮಾನವ ಹಕ್ಕುಗಳ ಆಯೋಗ ಒಂದು ಸುದ್ಧಿ ಪ್ರಕಟಿಸಿತ್ತು. ಪಾಕಿಸ್ತಾನದಲ್ಲಿ ಕ್ಷುಲ್ಲಕ ಕಾರಣಗಳಿಗಾಗಿ ಮುಸ್ಲಿಂ ಮಹಿಳೆಯರಿಗೆ ಮರಣದಂಡನೆ ವಿಧಿಸಲಾಗುತ್ತದೆ. ವ್ಯಕ್ತಿಯೊಬ್ಬನನ್ನು ಕಂಡು ಮುಗುಳ್ನಕ್ಕಿದ್ದು ಅಪರಿಚಿತನೊಡನೆ ಮಾತನಾಡಿದ್ದು ಕೂಡ ಇದಕ್ಕೆ ಕಾರಣವಾಗಿರಬಹುದು. ಈ ವರ್ಷ ಪ್ರಥಮ ಮೂರು ತಿಂಗಳಲ್ಲಿ ಈ ರೀತಿ ನೂರು ಮಹಿಳೆಯರನ್ನು ಹತ್ಯೆಯಾಗಿದೆ. ಅಕ್ರಮ ಸಂಬಂಧಗಳಂತಹ ಪ್ರಕರಣಗಳಲ್ಲಿ ಗಂಡು ಹೆಣ್ಣುಗಳಿಬ್ಬರೂ ಸಮಾನರಾಗಿ ಶಿಕ್ಷಾರ್ಹರಾಗಿದ್ದರೂ ಪುರುಷರಿಗೆ ಅಂತಹ ಕಠಿಣ ಶಿಕ್ಷೆ ಇಲ್ಲವಾದರೂ ಮಹಿಳೆಗೆ ಮಾತ್ರ ಮರಣದಂಡನೆ ವಿಧಿಸಲಾಗುತ್ತದೆ. ಮಹಿಳೆಯರನ್ನು ಮರಣದಂಡನೆಗೆ ಗುರಿಪಡಿಸಿ ಆಕೆಯ ಆಸ್ತಿ ಲಪಟಾಯಿಸುವುದೂ ಕೂಡಾ ಶಿಕ್ಷೆಯ ಹಿಂದಿರುವ ಉದ್ದೇಶವೆನ್ನಲಾಗಿದೆ. ಇಂಡೋನೇಷ್ಯಾ, ಪಾಕಿಸ್ತಾನ, ಟರ್ಕಿ ಮುಂತಾದ ಮುಸ್ಲಿಂ ರಾಷ್ಟ್ರಗಳು ಈಗ ತಮ್ಮ ವ್ಯಕ್ತಿ ನಿಯಮದಲ್ಲಿ ಬದಲಾವಣೆ ಮಾಡಿಕೊಂಡಿವೆ. ಪಾಕ್ತಿಸ್ತಾನದಲ್ಲಿ ಓರ್ವನು ಎರಡನೇ ಮದುವೆಯಾಗಬೇಕಾದರೆ ಸರ್ಕಾರಕ್ಕೆ ಸರಿಯಾದ ಕಾರಣ ನೀಡಿ ಸಕಾರದ ಒಪ್ಪಿಗೆ ಪಡೆಯಬೇಕು. ಹಾಗೆಯೇ ಟರ್ಕಿ, ಈಜಿಪ್ಟ್ ಮುಂತಾದ ದೇಶಗಳೂ ತಮ್ಮ ನಿಯಮಗಳಲ್ಲಿ ಬದಲಾವಣೆ ಮಾಡಿಕೊಂಡಿವೆ. ಸೌದಿ ಅರೇಬಿಯಾದಲ್ಲಿ ತಲಾಖ್ ನೀಡಿದ ಮಹಿಳೆಗೆ ಮನೆ ಮತ್ತು ಆಕೆಯ ಮುಂದಿನ ಬದುಕಿಗೆ ಹಾದಿಯಗುವಂತೆ ಒಂದೇ ಮೊತ್ತದಲ್ಲಿ ಹಣ ಪಾವತಿಸಬೇಕೆಂಬ ನಿಯಮವಿದೆ"[೭೮] ಆದರೆ ನಮ್ಮ ದೇಶದಲ್ಲಿ ಮಾತ್ರ ಧಾರ್ಮಿಕವಾದ ವ್ಯಕ್ತಿ ನಿಯಮ

ಅನುಷ್ಠಾನವದಲ್ಲಿದ್ದರೂ ಅದರಲ್ಲಿ ಬದಲಾವಣೆ ಎಂದರೆ 'ಧಾರ್ಮಿಕ' ನಿಯಮದಲ್ಲಿ ಹಸ್ತಕ್ಷೇಪವೆಂದು ಕೂಗೆಬ್ಬಿಸಿ ಮಹಿಳೆಯರನ್ನೇ ಮತ್ತಷ್ಟು ಅದೋಗತಿಗೆ ತಳ್ಳಲಾಗುತ್ತದೆ.

ಫಕೀರ್ ಮುಹಮ್ಮದ್ ಕಟ್ಪಾಡಿಯವರ 'ಸರಕುಗಳು' ಕಾದಬರಿಯಲ್ಲಿ ನಫೀಸಾಳ ಅಣ್ಣ ಮಮ್ಮುಟ್ಟಿಯನ್ನು ಕುರಿತು ಹುಸೇನನ ಅಮ್ಮ "ನಿನ್ನ ತಂಗಿಯನ್ನು ನನ್ನ ಮಗ ಹುಸೇನನಿಗೆ ಗಂಟು ಹಾಕಬೇಕೆಂದಿದ್ದೀಯಂತೆ! ನೋಡು ನಾವು ಹೊಟ್ಟೆಗಿಲ್ಲದಿದ್ರೂ ಮರ್ಯಾದೆ ಉಳಿಸಿಕೊಂಡವ್ರು. ನನ್ನ ಮಗನಿಗೆ ಬೇರೆಲ್ಲಿಯೂ ಹೆಣ್ಣು ಸಿಗಲ್ಲಾಂತ ನಿಮ್ಮ ಕೇರಿಯ ಹೆಣ್ಣನ್ನು ಮದುವೆಯಾಗ್ಬೇಕಾ? ನಿನ್ನ ತಂಗಿಯನ್ನು ಯಾವನಾದರೂ ಅರಬ ಬಂದು ಹಣ ಕೊಟ್ಟು ಕೊಂಡಾನು. ನನ್ನ ಮಗನ ಸುದ್ಧಿಗೆ ಬರಬೇಡ"[೨೮] ಎನ್ನುವಳು. ಇಲ್ಲಿ ಮುಸ್ಲಿಂರಲ್ಲೇ ಮನೆ ಮಾಡಿರುವ ವರ್ಗತಾರತಮ್ಯ ಹೀಗೆ ವ್ಯಕ್ತವಾಗಿದೆ.

ಕುಟ್ಟಿಚ್ಚಿರಾದ 'ಕೋಯಾ' ಕುಟುಂಬದ ಗಂಡುಗಳಿಗೆ ಹೆಣ್ಣು ಕೊಡುವ ಮುಸ್ಲಿಂ ಜನಾಂಗ ಅಲ್ಲಿನ ಹೆಣ್ಣುಗಳನ್ನು ತಮ್ಮ ಗಂಡುಗಳಿಗೆ ತಂದುಕೊಳ್ಳುವುದಿಲ್ಲ. ಕಾರಣ ತನ್ನ ಊರಿನಲ್ಲಿ ಗಡ್ಡ ತೆಗೆಸಲು ತಗಲುವ ವೆಚ್ಚದಷ್ಟು 'ಮಹರ್' ತೆತ್ತು ಕುಟ್ಟಿಚ್ಚಿರಾದ ಹೆಣ್ಣೊಂದರ ಜೊತೆ 'ನಿಕಾಹ್' ಆಗುವ ಅರಬಿಯ ಪೇಟೆಯ ಲಾಡ್ಜಿಂಗ್‌ನಲ್ಲಿ ಆಕೆಯ ಜೊತೆ ೨–೩ ತಿಂಗಳ ಕಾಲ ಸಂಸಾರ ನಡೆಸಿ ತಾನು ಮರಳುವ ಮುನ್ನ ನೆನಪಿಟ್ಟು ಆಕೆಗೆ 'ತಲಾಖ್' ನೀಡುವ ಮೂಲಕ ತನ್ನ ವ್ಯಭಿಚಾರದ ಪಾಪದಿಂದ ಮುಕ್ತನಾಗುತ್ತಾನೆ. ಅರಬಿಗಳು ವಾರಗಟ್ಟಲೆ ಬಳಸಿ ಉಳಿಸಿ ಹೋದ ಸರಕುಗಳಾದ ಹೆಣ್ಣು ಮಕ್ಕಳು ಮತ್ತೆ ತಮ್ಮ ಗುಡಿಸಲುಗಳಲ್ಲಿ ಮಕ್ಕಳನ್ನು ಹೆತ್ತು ಮುಂದಿನ ಸೀಜನ್‌ನಲ್ಲಿ ಬರಬಹುದಾದ ಹೊಸ ಅರಬಿಗಳಿಗಾಗಿ ದೇಹ ಉಳಿಸಿಕೊಳ್ಳುತ್ತಾರೆ. ಹೀಗೆ ಅಂಥ ಅರಬಿಯಿಂದ ಹುಟ್ಟಿದ ನಫೀಸಾಳನ್ನು ಹುಸೇನಾಳ ತಾಯಿ ತನ್ನ ಮಗನಿಗೆ ತಂದುಕೊಳ್ಳಲು ಒಪ್ಪುವುದಿಲ್ಲ. ಅದೇ ಕುಟುಂಬದಲ್ಲಿ ಹುಟ್ಟಿದ ಗಂಡಿಗೆ ಯಾವ ಶುದ್ಧತೆಯ ಪ್ರಶ್ನೆ ಬರುವುದಿಲ್ಲ. ಆದರೆ ಹೆಣ್ಣು ಮಾತ್ರ ಶ್ರೇಷ್ಠ ಕನಿಷ್ಠಗಳ ತಾರತಮ್ಯಕ್ಕೆ ಒಳಗಾಗುತ್ತಾಳೆ. ಅದೇ ರೀತಿ ಸೈದುಕೋಯ ಮತ್ತು ಷರಿಪಮ್ಮನವರು ಈ ಹುಡಿಗಯ ಮೇಲೆ ಅರಬ ಮುದ್ರೆಯನ್ನು ನೆನಪಿಸಿಕೊಂಡು ತನ್ನ ಮಗನಾದ ಸಲೀಂನಿಗೆ ತಂದುಕೊಳ್ಳುವುದಿಲ್ಲ. ಇಲ್ಲಿ ಸಾಮಾಜಿಕ ವರ್ಗವು ತನ್ನ ಶ್ರೇಷ್ಠತೆಯನ್ನು ವಿವರಿಸಿಕೊಳ್ಳುವ ಮಾನದಂಡವು ಶುದ್ಧತೆಯನ್ನಾಧರಿಸಿದೆ.

## ಕೊನೆ ಟಿಪ್ಪಣಿಗಳು


೧. ವಿಜಯಾ ಡಿ.(ಸಂ), ಸಣ್ಣಕಥೆಯ ಸೊಗಸು, ಗೀತಾಬುಕ್ ಹೌಸ್ ಮೈಸೂರು,ಪುಟ–೨೦

೨. ಫಕೀರ್ ಮುಹಮ್ಮದ್ ಕಟ್ಪಾಡಿ, ಸರಕುಗಳು, ನವಕರ್ನಾಟಕ ಪ್ರಕಾಶನ,ಪುಟ–೬೯

೩. ಫಕೀರ್ ಮುಹಮ್ಮದ್ ಕಟ್ಪಾಡಿ,ಕಚ್ಚಾದ, ಕಾಮಧೇನು ಪ್ರಕಾಶನ,ಪುಟ–೬

೪. ಫಕೀರ್ ಮುಹಮ್ಮದ್ ಕಟ್ಪಾಡಿ,ಸರಕುಗಳು, ನವಕರ್ನಾಟಕ ಪ್ರಕಾಶನ,ಪುಟ–೫೭

೫. ಸಾರಾ ಅಬೂಬಕ್ಕರ್, ಅನಾವರಣ, ಚಂದ್ರಗಿರಿ ಪ್ರಕಾಶನ, ಪುಟ–೩೬

೬. ಫಕೀರ್ ಮುಹಮ್ಮದ್ ಕಟ್ಪಾಡಿ,ಸರಕುಗಳು,ನವಕರ್ನಾಟಕ ಪ್ರಕಾಶನ, ಪುಟ–೫೭

೭. ಷರೀಪಾ. ಕೆ. ಮುಸ್ಲಿಂ ಮಹಿಳಾ ಸಂವೇದನೆ, ಅಂಕಿತ ಪುಸ್ತಕ, ಪುಟ–೧೦೦

೮. ಸಾರಾ ಅಬೂಬಕ್ಕರ್, ಚಪ್ಪಲಿಗಳು, ಚಂದ್ರಗಿರಿ ಪ್ರಕಾಶನ, ಪುಟ–೧೦

೯. ಅದೇ ಪುಟ–೧೩

೧೦. ಷರೀಪಾ. ಕೆ. ಮುಸ್ಲಿಂ ಮಹಿಳಾ ಸಂವೇದನೆ, ಅಂಕಿತ ಪುಸ್ತಕ, ಪುಟ–೧೩೬

೧೧. ಪೆರ್ಲಮಾಭ, ಭಾರತೀಯ ವಿವಾಹ ಸಂಸ್ಕಾರ, ಕನ್ನಡ ಪ್ರಸಾರಾಂಗ, ಪುಟ–೭

೧೨. ಫಕೀರ್ ಮುಹಮ್ಮದ್ ಕಟ್ಪಾಡಿ, ಸರಕುಗಳು, ನವಕರ್ನಾಟಕ ಪ್ರಕಾಶನ,ಪುಟ–೭೬

೧೩. ಬೊಳವಾರ ಮುಹಮ್ಮದ್ ಕುಂಞ, ಆಕಾಶಕ್ಕೆ ನೀಲಿಪರದೆ,ಕಾ. ಪು. ಬೆಂಗಳೂರು,ಪುಟ–೪೮–೪೯

೧೪. ಷರೀಪಾ. ಕೆ. ಮುಸ್ಲಿಂ ಮಹಿಳಾ ಸಂವೇದನೆ, ಅಂಕಿತ ಪುಸ್ತಕ, ಪುಟ–೧೦೯

೧೫. ಫಕೀರ್ ಮುಹಮ್ಮದ್ ಕಟ್ಪಾಡಿ,ಕಚ್ಚಾದ, ಕಾಮಧೇನು ಪ್ರಕಾಶನ,ಪುಟ–೯೮

೧೬. ಫಕೀರ್ ಮುಹಮ್ಮದ್ ಕಟ್ಪಾಡಿ,ಕಚ್ಚಾದ, ಕಾಮಧೇನು ಪ್ರಕಾಶನ,ಪುಟ–೯೯

೧೭. ಷರೀಪಾ. ಕೆ. ಮುಸ್ಲಿಂ ಮಹಿಳಾ ಸಂವೇದನೆ, ಅಂಕಿತ ಪುಸ್ತಕ, ಪುಟ–೧೩೮

೧೮. ಫಕೀರ್ ಮುಹಮ್ಮದ್ ಕಟ್ಪಾಡಿ, ಸರಕುಗಳು, ನವಕರ್ನಾಟಕ ಪ್ರಕಾಶನ,ಪುಟ–೫೭

೧೯. ಸಾರಾ ಅಬೂಬಕ್ಕರ್, ಅನಾವರಣ, ಚಂದ್ರಗಿರಿ ಪ್ರಕಾಶನ, ಪುಟ–೩೬

೨೦. ಸಾರಾ ಅಬೂಬಕ್ಕರ್, ಅನಾವರಣ, ಚಂದ್ರಗಿರಿ ಪ್ರಕಾಶನ, ಪುಟ–೩೬

೨೧. ಫಕೀರ್ ಮುಹಮ್ಮದ್ ಕಟ್ಪಾಡಿ,ಕಚ್ಚಾದ, ಕಾಮಧೇನು ಪ್ರಕಾಶನ,ಪುಟ–೧೩

೨೨. ಮಹದೇವ ಕುಕ್ಕರಹಳ್ಳಿ, ಬೆಂಕಿಯೊಳಗಿನ ಬದುಕು,೨೦೦೬, ಪುಟ-೩೭

೨೩. ಪುತ್ತಿಗೆ ಎ. ಎಸ್. ಮುಸ್ಲಿಂ ಶೈಕ್ಷಣಿಕ ಸಮಸ್ಯೆಗಳು; ಪತನಗಾಥೆ ಮತ್ತು ಉತ್ಥಾನಪಥ ಲೇಖನ- ಶಿಕ್ಷಣಮತ್ತು ಮುಸ್ಲಿಮರು, ಪುಟ-೬೯

೨೪. ಫಕೀರ್ ಮುಹಮ್ಮದ್ ಕಟ್ಪಾಡಿ,ಕಚ್ಚಾದ, ಕಾಮಧೇನು ಪ್ರಕಾಶನ,ಪುಟ-೨೪

೨೫. ಫಕೀರ್ ಮುಹಮ್ಮದ್ ಕಟ್ಪಾಡಿ,ಕಚ್ಚಾದ, ಕಾಮಧೇನು ಪ್ರಕಾಶನ,ಪುಟ-೨೪

೨೬. ಫಕೀರ್ ಮುಹಮ್ಮದ್ ಕಟ್ಪಾಡಿ,ಕಚ್ಚಾದ, ಕಾಮಧೇನು ಪ್ರಕಾಶನ,ಪುಟ-೨೪

೨೭. ಸಾರಾ ಅಬೂಬಕ್ಕರ್, ಸಾಹಿತ್ಯ,ಸಂಸ್ಕೃತಿ ಮತ್ತು ಮಹಿಳೆ, ಪುಟ-೧೧೫-೧೧೬

೨೮. ಸಾರಾ ಅಬೂಬಕ್ಕರ್, ಅನಾವರಣ, ಪುಟ-೩೮

೨೯. ಹಿರಣ್ಮಯ, ಮುಸ್ಲಿಂ ಉತ್ಸವಗಳು ಮತ್ತು ಸಂಸ್ಕಾರಗಳು ಶ್ರೀಪಾದ ಜೋಷಿ, ಕ. ಅ. ಸಂ. ಮೈಸೂರು ಪುಟ-೪೪

೩೦. ಹಿರಣ್ಮಯ, ಮುಸ್ಲಿಂ ಉತ್ಸವಗಳು ಮತ್ತು ಸಂಸ್ಕಾರಗಳು ಶ್ರೀಪಾದ ಜೋಷಿ, ಕ. ಅ. ಸಂ. ಮೈಸೂರು ಪುಟ-೪೫

೩೧. ಕುರ್ ಆನ್ ವ್ಯಾಖ್ಯಾನ ಭಾಗ-೧, ಶಾಂತಿ ಪ್ರಕಾಶನ, ಮಂಗಳೂರು, ೧೯೯೪, ಪುಟ-೨೫೪,೫೯,-ಸೂ:೪-೨೩-೨೪

೩೨. ಫಕೀರ್ ಮುಹಮ್ಮದ್ ಕಟ್ಪಾಡಿ, ಸರಕುಗಳು, ನವಕರ್ನಾಟಕ ಪ್ರಕಾಶನ,ಪುಟ-೬-೭

೩೩. ಫಕೀರ್ ಮುಹಮ್ಮದ್ ಕಟ್ಪಾಡಿ, ಸರಕುಗಳು, ನವಕರ್ನಾಟಕ ಪ್ರಕಾಶನ,ಪುಟ-೭೧

೩೪. ಫಕೀರ್ ಮುಹಮ್ಮದ್ ಕಟ್ಪಾಡಿ, ಸರಕುಗಳು, ನವಕರ್ನಾಟಕ ಪ್ರಕಾಶನ,ಪುಟ-೩೪

೩೫. ಫಕೀರ್ ಮುಹಮ್ಮದ್ ಕಟ್ಪಾಡಿ, ಸರಕುಗಳು, ನವಕರ್ನಾಟಕ ಪ್ರಕಾಶನ,ಪುಟ-೭೧

೩೬. ಸಾರಾ ಅಬೂಬಕ್ಕರ್, ಸಾಹಿತ್ಯ,ಸಂಸ್ಕೃತಿ ಮತ್ತು ಮಹಿಳೆ, ಪುಟ-೧೬

೩೭. ಫಕೀರ್ ಮುಹಮ್ಮದ್ ಕಟ್ಪಾಡಿ, ಸರಕುಗಳು, ನವಕರ್ನಾಟಕ ಪ್ರಕಾಶನ, ಪುಟ-೨೩

೩೮. ಫಕೀರ್ ಮುಹಮ್ಮದ್ ಕಟ್ಪಾಡಿ, ಸರಕುಗಳು, ನವಕರ್ನಾಟಕ ಪ್ರಕಾಶನ, ಪುಟ-೨೨

೩೯. ಇಬ್ಬಣಂಗೋಡು ಬಿ. ಎಂ. ಬ್ಯಾರಿ ಭಾಷೆ, ಸಂಸ್ಕೃತಿ ಸಂಶೋಧನಾ ಗ್ರಂಥ(ಸಂ), ಪುಟ-೧೩೦

೪೦. ಷರೀಪಾ. ಕೆ. ಮುಸ್ಲಿಂ ಮಹಿಳಾ ಸಂವೇದನೆ, ಅಂಕಿತ ಪುಸ್ತಕ, ಪುಟ-೮೩

೪೧. ಫಕೀರ್ ಮುಹಮ್ಮದ್ ಕಟ್ಪಾಡಿ,ಕಚ್ಚಾದ, ಕಾಮಧೇನು ಪ್ರಕಾಶನ, ಪುಟ–೯೮

೪೨. ಸಾರಾ ಅಬೂಬಕ್ಕರ್, ಚಪ್ಪಲಿಗಳು, ಚಂದ್ರಗಿರಿ ಪ್ರಕಾಶನ, ಪುಟ–೬

೪೩. ಕಳಕಣ್ಣವರ ಆಯ್. ಆಯ್. ಧರ್ಮ ಹಾಗೂ ಅವತಾರ, ಉಪನ್ಯಾಸ ಮಾಲೆ, ಕ.ವಿ.ವಿ. ಧಾರವಾಡ,೧೯೭೩, ಪುಟ–೫

೪೪. ಕುಂದರಗಿ ಜಿ. ಎನ್. ಧರ್ಮ ಮತ್ತು ಸಾಹಿತ್ಯ, ಉ.ಕ.ಜಿ.ಸ.ಮು.ಸಂ.ನಿ. ಕುಮುಟಾ, ೧೯೬೫, ಪುಟ–೩

೪೫. ನಂಜೇಗೌಡ ಎಚ್. ಎನ್, ಸಮನ್ವಯ, ಸಹ್ಯಾದ್ರಿ ಪ್ರಕಾಶನ, ಶಿವಮೊಗ್ಗ,ಪುಟ–೩

೪೬. ನಂಜೇಗೌಡ ಎಚ್. ಎನ್, ಸಮನ್ವಯ, ಸಹ್ಯಾದ್ರಿ ಪ್ರಕಾಶನ, ಶಿವಮೊಗ್ಗ, ಪ್ಪ–೩

೪೭. ನಂಜೇಗೌಡ ಎಚ್. ಎನ್, ಸಮನ್ವಯ, ಸಹ್ಯಾದ್ರಿ ಪ್ರಕಾಶನ, ಶಿವಮೊಗ್ಗ, ಪುಟ೩

೪೮. ನಂಜೇಗೌಡ ಎಚ್. ಎಮ್, ಸಮನ್ವಯ, ಸಹ್ಯಾದ್ರಿ ಪ್ರಕಾಶನ, ಶಿವಮೊಗ್ಗ, ಪುಟ೩

೪೯. ಕುಂದರಗಿ ಜಿ. ಎನ್. ಧರ್ಮ ಮತ್ತು ಸಾಹಿತ್ಯ, ಉ.ಕ.ಜಿ.ಸ.ಮು.ಸಂ.ನಿ. ಕುಮುಟಾ, ೧೯೬೫, ಪುಟ–೨

೫೦. ಕುಂದರಗಿ ಜಿ. ಎನ್. ಧರ್ಮ ಮತ್ತು ಸಾಹಿತ್ಯ, ಉ.ಕ.ಜಿ.ಸ.ಮು.ಸಂ.ನಿ. ಕುಮುಟಾ, ೧೯೬೫, ಪುಟ–೨

೫೧. ಕುಂದರಗಿ ಜಿ. ಎನ್. ಧರ್ಮ ಮತ್ತು ಸಾಹಿತ್ಯ, ಉ.ಕ.ಜಿ.ಸ.ಮು.ಸಂ.ನಿ. ಕುಮುಟಾ, ೧೯೬೫, ಪುಟ–೩–೪

೫೨. ಕಳಕಣ್ಣವರ ಆಯ್. ಆಯ್. ಧರ್ಮ ಹಾಗೂ ಅವತಾರ, ಉಪನ್ಯಾಸ ಮಾಲೆ, ಕ.ವಿ.ವಿ. ಧಾರವಾಡ, ೧೯೭೩, ಪುಟ–೧೦–೧೧

೫೩. ಗಜೇಂದ್ರಗಡ ಎಂ. ಆರ್. ಇಸ್ಲಾಂ ಧರ್ಮ, ಸಮನ್ವಯ, ಸಹ್ಯಾದ್ರಿ ಪ್ರಕಾಶನ ಶಿವಮೊಗ್ಗ, ೧೯೯೮, ಪುಟ–೪೯

೫೪. ಶಂಕರರಾವ್ ಚಿ. ಸಂ. ಭಾರತೀಯ ಸಮಾಜ, ಶಾಂತಿ ಪ್ರ. ಮಂಗಳೂರು,೧೯೯೯,ಪುಟ–೪೩೪

೫೫. ಇಬ್ರಾಹಿಮ್ ಸಈದ್, ಇಸ್ಲಾಂಧರ್ಮ, ಶಾಂತಿ ಪ್ರ. ಮಂಗಳೂರು,೧೯೯೯, ಪುಟ೭

೫೬. ಇಬ್ರಾಹಿಮ್ ಸಈದ್, ತಪ್ಪುಕಲ್ಪನೆಗಳು, ಶಾಂತಿ ಪ್ರ.ಮಂಗಳೂರು,೧೯೯೫ ಪುಟ– ೧೯

೫೭. ದಸ್ತಗೀರ್ ಅಲ್ಲಃಭಾಯಿ, ಮೋಹರಂ ಪದಗಳು, ಕ. ಪು.ಪ್ರಾ, ಬೆಂಗಳೂರು,೧೯೯೯, ಪು–೨೯೩

೫೮. ಸಾರಾ ಅಬೂಬಕ್ಕರ್, ಚಪ್ಪಲಿಗಳು, ಚಂದ್ರಗಿರಿ ಪ್ರಕಾಶನ, ಪುಟ–೧೨

೫೯. ಷರೀಪಾ. ಕೆ. ಮುಸ್ಲಿಂ ಮಹಿಳಾ ಸಂವೇದನೆ, ಅಂಕಿತ ಪುಸ್ತಕ, ಪುಟ–೬೮

೬೦. ಫಕೀರ್ ಮುಹಮ್ಮದ್ ಕಟ್ಪಾಡಿ, ಸರಕುಗಳು, ನವಕರ್ನಾಟಕ ಪ್ರಕಾಶನ, ಪುಟ–೫೬

೬೧. ಫಕೀರ್ ಮುಹಮ್ಮದ್ ಕಟ್ಪಾಡಿ, ಸರಕುಗಳು, ನವಕರ್ನಾಟಕ ಪ್ರಕಾಶನ, ಪುಟ–೬೯

೬೨. ಫಕೀರ್ ಮುಹಮ್ಮದ್ ಕಟ್ಪಾಡಿ, ಕಚ್ಚಾದ, ಕಾಮಧೇನು ಪ್ರಕಾಶನ, ಪುಟ–೯೮

೬೩. ಫಕೀರ್ ಮುಹಮ್ಮದ್ ಕಟ್ಪಾಡಿ,ಕಚ್ಚಾದ, ಕಾಮಧೇನು ಪ್ರಕಾಶನ, ಪುಟ–೯೯

೬೪. ಷರೀಪಾ. ಕೆ. ಮುಸ್ಲಿಂ ಮಹಿಳಾ ಸಂವೇದನೆ, ಅಂಕಿತ ಪುಸ್ತಕ, ಪುಟ–೧೩೫–೧೩೬

೬೫. ನಿಸಾರ್ ಅಹಮ್ಮದ್ ಕೆ. ಎಸ್, ಸಮಗ್ರ ಕವಿತೆಗಳು, ಸಪ್ನಬುಕ್ ಹೌಸ್, ಪುಟ–೧೩೧–೧೩೨

೬೬. ಫಕೀರ್ ಮುಹಮ್ಮದ್ ಕಟ್ಪಾಡಿ,ಕಚ್ಚಾದ, ಕಾಮಧೇನು ಪ್ರಕಾಶನ,

೬೭. ಫಕೀರ್ ಮಹಮ್ಮದ್ ಕಟ್ಪಾಡಿ, ಸರಕುಗಳು, ನವಕರ್ನಾಟಕ ಪ್ರಕಾಶನ, ಪುಟ–೧೧೭–೧೧೮

೬೮. ಫಕೀರ್ ಮುಹಮ್ಮದ್ ಕಟ್ಪಾಡಿ, ಸರಕುಗಳು, ನವಕರ್ನಾಟಕ ಪ್ರಕಾಶನ, ಪುಟ–೧೩೦

೬೯. ಫಕೀರ್ ಮುಹಮ್ಮದ್ ಕಟ್ಪಾಡಿ, ಸರಕುಗಳು, ನವಕರ್ನಾಟಕ ಪ್ರಕಾಶನ, ಪುಟ–೧೩೪

೭೦. ಫಕೀರ್ ಮುಹಮ್ಮದ್ ಕಟ್ಪಾಡಿ, ಸರಕುಗಳು, ನವಕರ್ನಾಟಕ ಪ್ರಕಾಶನ, ಪುಟ–೧೦೩

೭೧. ಫಕೀರ್ ಮುಹಮ್ಮದ್ ಕಟ್ಪಾಡಿ, ಸರಕುಗಳು, ನವಕರ್ನಾಟಕ ಪ್ರಕಾಶನ, ಪುಟ–೨೨

೭೨. ಫಕೀರ್ ಮುಹಮ್ಮದ್ ಕಟ್ಪಾಡಿ, ಸರಕುಗಳು, ನವಕರ್ನಾಟಕ ಪ್ರಕಾಶನ, ಪುಟ–೨೩

೭೩. ಫಕೀರ್ ಮುಹಮ್ಮದ್ ಕಟ್ಪಾಡಿ,ಕಚ್ಚಾದ, ಕಾಮಧೇನು ಪ್ರಕಾಶನ, ಪುಟ–೯೮

೭೪. ಸಾರಾ ಅಬೂಬಕ್ಕರ್, ಚಪ್ಪಲಿಗಳು, ಚಂದ್ರಗಿರಿ ಪ್ರಕಾಶನ, ಪುಟ–೧೬

೭೫. ಫಕೀರ್ ಮುಹಮ್ಮದ್ ಕಟ್ಪಾಡಿ, ಸರಕುಗಳು, ನವಕರ್ನಾಟಕ ಪ್ರಕಾಶನ, ಪುಟ–೬೨

೭೬. ಫಕೀರ್ ಮಹಮ್ಮದ್ ಕಟ್ಪಾಡಿ, ಸರಕುಗಳು, ನವಕರ್ನಾಟಕ ಪ್ರಕಾಶನ, ಪುಟ–೬೯–೭೦–೭೧

೭೭. ಬೊಳುವಾರು ಮಹಮ್ಮದ್ ಕುಂ. ಞಿ, ಸರಕುಗಳು, ಮುನ್ನುಡಿ, ನವಕರ್ನಾಟಕ, ಪುಟ೬

೭೮. ಸಾರಾ ಅಬೂಬಕ್ಕರ್, ಅನಾವರಣ, ಚಂದ್ರಗಿರಿ ಪ್ರಕಾಶನ, ಪುಟ-೪೦

೭೯. ಫಕೀರ್ ಮುಹಮ್ಮದ್ ಕಟ್ಪಾಡಿ, ಸರಕುಗಳು, ನವಕರ್ನಾಟಕ ಪ್ರಕಾಶನ, ಪುಟ-೩೪

# ಅಧ್ಯಾಯ : ಐದು
# ಸಮಾರೋಪ

ಕನ್ನಡ ದಲಿತ ಬಂಡಾಯ ಪಂಥದ ಮುಖ್ಯ ಲೇಖಕರಾದ ಫಕೀರ್ ಮುಹಮ್ಮದ್ ಕಟ್ಪಾಡಿಯವರು ಒಬ್ಬರು. ತಮ್ಮ ಕಥೆ ಕಾದಂಬರಿಗಳ ಮೂಲಕ ವಿಶಿಷ್ಟ ಛಾಪನ್ನು ಮೂಡಿಸಿದ ಲೇಖಕರು. ಕಥಾವಸ್ತು ವಿಷಯದ ಆಯ್ಕೆಯಲ್ಲಿಯೇ ನಾವೀನ್ಯತೆಯನ್ನು ತೋರಿಸಿದ್ದಾರೆ. ಅವುಗಳ ನಿರೂಪಣಾ ತಂತ್ರ ಹಾಗೂ ವಿಚಾರ ಮಂಥನದಿಂದಾಗಿ ಸಹೃದಯರ ಮನಸೂರೆಗೊಂಡಿದ್ದಾರೆ. ಅವರ ಕಾದಂಬರಿಗಳು ಕೇವಲ ಎರಡು ಮಾತ್ರವಾದರೂ ಅವುಗಳ ಮೌಲ್ಯಕ್ಕೆ ಬೆಲೆ ಕಟ್ಟಲಾಗದು.

ಕಟ್ಪಾಡಿಯವರು ಎರಡು ಕಾದಂಬರಿಗಳು ಸಮಾಜದ ವಿವಿಧ ಮುಖಗಳನ್ನು ನಮ್ಮ ಮುಂದೆ ತೆರೆದಿರುಸುತ್ತವೆ. ನಾವೆಲ್ಲ ಪವಿತ್ರ ಬಂಧನವೆಂದು ನಂಬಿರುವ 'ವಿವಾಹ'ವು ಹೇಗೆ ಎಷ್ಟೋ ಜನ ಜನ ಅಮಾಯಕ ಹೆಣ್ಣುಮಕ್ಕಳ ಅನಂತ ಸಂಕಟಕ್ಕೆ ಮೂಲವಾಗಿದೆಯೆಂಬುದನ್ನು ತಮ್ಮ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ.

ಬಡತನದ ಬೇಗೆಯನ್ನು ಸ್ವತಃ ಅನುಭವಿಸಿದ ಕಟ್ಪಾಡಿಯವರು ಆ ಅನುಭವಕ್ಕೆ ಜೀವ ತುಂಬಿ ಸೃಜನಶೀಲತೆಯಿಂದ ಕೂಡಿದ ಹಲವಾರು ಕತೆ ಕಾದಂಬರಿಗಳನ್ನು ಬರೆದಿದ್ದಾರೆ. ಮುಸ್ಲಿಂ ಸಮಾಜದಲ್ಲಿದ್ದಂತಹ ಪ್ರಧಾನ ಸಮಸ್ಯೆಗಳು ಇವರನ್ನು ಬಹತೇಕವಾಗಿ ಆಕರ್ಷಿಸಿತು. ಈ ಸಮಸ್ಯೆಗಳು ಮತ್ತು ಹಲವಾರು ಪತ್ತೆದಾರಿ ಕಾದಂಬರಿಯನ್ನು ಓದುವ ಮೂಲಕ ಕಾದಂಬರಿ ಬರೆಯಲು ಆಸಕ್ತಿಮೂಡಿಸಿಕೊಂಡರು. ಜೊತೆಗೆ ತರಾಸು, ಅನಕೃ, ಕೃಷ್ಣಮೂರ್ತಿ, ಪುರಾಣಿಕ, ತ್ರಿವೇಣಿ ಅವರ ಕಾದಂಬರಿಗಳು ಅವರನ್ನು ಕತೆ ಕಾದಂಬರಿಕಾರರಾಗಿ ಬೆಳೆಯಲು ಪ್ರೇರಣೆ ಕೊಟ್ಟವು. ಕರಾವಳಿಯ ಬ್ಯಾರಿ ಮುಸ್ಲಿಂರಲ್ಲಿರುವ 'ತಲಾಖ್' ಮುಂತಾದ ಧರ್ಮಾಚರಣೆ ಮತ್ತು ಕೇರಳದ 'ತಲಾಖ್' ಪದ್ಧತಿಗಳನ್ನು ಕಣ್ಣಾರೆ ಕಂಡು ಅವರು ಕಾದಂಬರಿ ಬರೆಯಲು ಪ್ರೇರಣೆ

ಪಡೆದರು. ತಮ್ಮ ಬದುಕಿನಲ್ಲಿ ನಡದ ಹಲವಾರು ಘಟನೆಗಳನ್ನು ವಿಭಿನ್ನ ರೀತಿಯಲ್ಲಿ ತಮ್ಮ ಕಾದಂಬರಿಯಲ್ಲಿ ಚಿತ್ರಿಸಿದರು.

ಕನ್ನಡ ಸಾಹಿತ್ಯದಲ್ಲಿ ಎಂಬತ್ತರ ದಶಕದ ಬಂಡಾಯ ಮತ್ತು ಪ್ರತಿಭಟನೆಯ ಕಾಲ ಹಲವು ಉಪಸಂಸ್ಕೃತಿಯಿಂದ ಬಂದ ಲೇಖಕರು ಪ್ರಧಾನವಾಗಿ ಬರವಣಿಗೆಯ ತಾತ್ವಿಕತೆಯನ್ನು ಪ್ರಶ್ನಿಸಿದರು. ದಲಿತ, ಬಂಡಾಯ, ಸ್ತ್ರೀವಾದಿ, ಮುಸ್ಲಿಂ ಸಂವೇದನೆಗಳ ಸಂದರ್ಭದಲ್ಲಿ ಕಟ್ಪಾಡಿಯವರ ಬರಹಗಳು ಬಂದವು. ಇವರು ತೆರೆದಿಟ್ಟ ಅನುಭವಗಳು ಕನ್ನಡಕ್ಕೆ ಹೊಸದಾಗಿದ್ದವು ಎಂಬುದು ಒಂದು ಆಕರ್ಷಣೆಯಾಗಿದ್ದು ಜೊತೆಗೆ ಸಾಮಾಜಿಕ ಸಮಸ್ಯೆಗಳ ಆಳ ಅರಿವು ಮೂಡಿತು.

ತಮ್ಮ ಸಾಮಾಜದ ನ್ಯೂನೆತೆಗಳನ್ನು ಸರಿಪಡಿಸಬೇಕಾದರೆ ಲೇಖಕರು ವಸ್ತುಗಳು ಇದೇ ಬಗೆಯವು ಎಂದು ತಿಳಿದರು. ಪಿತೃಪ್ರಧಾನವಾದ ಅಧಿಕಾರವುಳ್ಳ ಮಾತೃಸಂಸ್ಕೃತಿಯ ಕುಟುಂಬದ ವ್ಯವಸ್ಥೆಯಲ್ಲಿ ಹೆಣ್ಣಿನ ಸ್ಥಾನಮಾನದ ಚಿತ್ರಣ, ಸ್ತ್ರೀಯರು, ಧಾರ್ಮಿಕವಾಗಿ ಶೋಷಿತರು, ವಿದ್ಯಾವಂತ ಮುಸ್ಲಿಂರ ಜೀವನ, ವಿಚ್ಛೇದಿತ ಸ್ತ್ರೀಯರು, ವರದಕ್ಷಿಣೆ ಸಮಸ್ಯೆ, ಬಡತನದಿಂದ ಒಪ್ಪತ್ತಿನ ಊಟಕ್ಕೂ ಪರದಾಡುವವರು, ದಲ್ಲಾಳಿಗಳ ಹಾವಳಿ, ಅರಬ್ಬರ ಕಾಮತೃಷೆಗೆ ಬಲಿಯಾಗುವ ಮಹಿಳೆ ಹೀಗೆ ಹತ್ತು ಹಲವು ಮುಖಗಳ ಚಿತ್ರಣ ಕಟ್ಪಾಡಿಯವರ ಕಾದಂಬರಿಗಳಲ್ಲಿ ಕಂಡು ಬಂದಿದೆ. ಕಾದಂಬರಿಯ ಮೂಲಕ ಮುಸ್ಲಿಂ ಸಮಾಜದ ಸ್ತ್ರೀಯರ ಬದುಕಿನ ಅಂತರಂಗವನ್ನು ತೆರೆದವರಲ್ಲಿ ಕಟ್ಪಾಡಿಯವರು ಪ್ರಮುಖರಾಗಿ ಕಾಣಿಸಿಕೊಳ್ಳುತ್ತಾರೆ. ಕನ್ನಡ ಕತೆ, ಕಾದಂಬರಿ ಲೋಕಕ್ಕೆ ಇವರ ಕೊಡುಗೆ ಅಪಾರ. ಇವರ ಕಾದಂಬರಿಗಳು ಕನ್ನಡ ಮಹಿಳಾ ಸಂವೇದನೆಗಳ ಚರಿತ್ರೆಯಲ್ಲಿ ಹೊಸ ಅಧ್ಯಾಯವನ್ನು ಪ್ರಾರಂಭಿಸಿದವು.

ಕಟ್ಪಾಡಿಯವರ ಕಾದಂಬರಿಗಳಲ್ಲಿ ಮುಸ್ಲಿಂ ಸಮಾಜವು ಸ್ತ್ರೀ– ಪುರುಷರ ಪಾತ್ರಗಳೇನು? ಪಿತೃಪ್ರಧಾನ ಅಧಿಕಾರವುಳ್ಳ ಮಾತೃಪ್ರಧಾನ ಸಂಸ್ಕೃತಿಯ ಕುಟುಂಬದಲ್ಲಿ ಅವಳನ್ನು ಹೇಗೆ ಶೋಷಣೆ ಮಾಡುತ್ತಿದ್ದಾರೆ. ಬಡತನದ ಕಾರಣಕ್ಕಾಗಿ ಹೊಟ್ಟೆಗೆ ಹಿಟ್ಟಿಲ್ಲದೆ ಅರಬ್ಬರ ಜೊತೆ 'ನಿಖಾಹ್' ಮಾಡಿಕೊಳ್ಳುವುದು, ಮುಸ್ಲಿಂ ಧರ್ಮದಲ್ಲಿ ಹೆಣ್ಣಿಗೆ ಶಿಕ್ಷಣದ ಅಗತ್ಯವಿಲ್ಲವೆಂದು ಅವಳ ಶಿಕ್ಷಣವನ್ನು ಕಸಿದುಕೊಂಡಿರುವುದು, ಧರ್ಮದ ಹೆಸರು ಹೇಳಿ ಅವಳಲ್ಲಿ ಭಯವನ್ನು ಹುಟ್ಟಿಸಿ ಅವಳನ್ನು ನಾಲ್ಕು ಗೋಡೆಯ ಮಧ್ಯದಲ್ಲಿಯೇ ಕಾಲಕಳೆಯುವಂತೆ ಮಾಡುತ್ತಿರುವ ವ್ಯವಸ್ಥೆ, ವರ್ಗ ತಾರತಮ್ಯ ಹೀಗೆ ಮುಸ್ಲಿಂ ಸಮಾಜದಲ್ಲಿರುವ ಸ್ತ್ರೀಯರ ಮೇಲಿನ ದಬ್ಬಾಳಿಕೆಯನ್ನು ತೆರೆದಿಟ್ಟವರಲ್ಲಿ ಕಟ್ಪಾಡಿ ಪ್ರಮುಖರು.

ಎಂಬತ್ತರ ದಶಕದಲ್ಲಿ ಏನು ಹೇಳಬೇಕೆಂಬುದು ಪ್ರಧಾನ ಕಳಕಳಿಯಾದರೆ ತೊಂಬತ್ತರ ದಶಕದ ಕಾದಂಬರಿ ಹೇಗೆ ಹೇಳಬೇಕೆಂಬುದರ ಕಡೆಗೆ, ಅಂದರೆ ಪ್ರಧಾನ ರೂಪ, ಶಿಲ್ಪ, ಆಕೃತಿ, ರಚನೆಗಳ ನಿರ್ಮಾಣದತ್ತ ಕಣ್ಣು ಅರಳಿಸಿದ್ದನ್ನು ಗಮನಿಸಬಹುದು. ಇದೇ ನೆಲದಲ್ಲಿ ಹಿಂದೂ ಸಮಾಜದಲ್ಲಿ ಕತ್ತಲಿದ್ದರೂ ಮುಸ್ಲಿಂ ಹಾಗೂ ಹಿಂದೂ ಸಮಾಜಗಳೆರಡರ ನಡುವೆ ಸಾಕಷ್ಟು ಭಾವನಾತ್ಮಕ ಸಾಂಸ್ಕೃತಿಕ ಅಂತರಗಳಿವೆ. ಆದರೆ ಮುಸ್ಲಿಂ ಜನಾಂಗದ ಹೆಣ್ಣು ಮಕ್ಕಳ ಸಮಸ್ಯೆ ಹೇಳತೀರದು. ಮುಖಕ್ಕೆ ಪರದೆ ಎಳೆದುಕೊಂಡಿರುವ ಈ ಹೆಣ್ಣು ಮಕ್ಕಳು ಹೊರಜಗತ್ತಿಗೂ ತಮಗೂ ಯಾವುದೇ ಭೌದ್ಧಿಕ ಸಂಬಂಧ ಸ್ಥಾಪಿಸಿಕೊಳ್ಳಲಾಗದೆ ಸೋಲುವಂತಹದು ಇದರೊಂದಿಗೆ ಬಡತನ, ಅವಿದ್ಯಾವಂತಿಕೆ ಇವು ಅವರ ಬಂಧನದ ಸ್ಥಿತಿಗೆ ಪೂರಕವಾಗಿ ದುಡಿಯುವಂತಹದು, ಇವರ ಕಾದಂಬರಿ 'ಕಚ್ಚಾದ' ಮತ್ತು 'ಸರಕುಗಳು' ಮುಸ್ಲಿಂ ಹೆಣ್ಣುಗಳ ನೋವು – ನಲಿವಿನ ಜೀವನವನ್ನು ಬಿಚ್ಚಿಕೊಡುತ್ತವೆ.

ತಮ್ಮ ಧರ್ಮದ ಬಗೆಗೆ ಅಪಾರವಾದ ಶ್ರದ್ಧೆ, ಗೌರವಗಳಿದ್ದರೂ ದೇವರು ಧರ್ಮಗಳುಂಟು ಮಾಡುವ ಅಪಾಯಗಳ ಬಗೆಗೆ ಸ್ಪಷ್ಟ ವಿರೋಧವಿದೆ. ಅವಿದ್ಯಾವಂತಿಕೆಯ ಬಗೆ ತೀವ್ರ ಸಿಟ್ಟಿದೆ. ತಮ್ಮ ಜನಾಂಗದ ಅಜ್ಞಾನ, ಮೂಢನಂಬಿಕೆ, ಧರ್ಮಾಂಧತೆ, ಸಂಪ್ರದಾಯಗಳು ಹೆಣ್ಣಿನ ಬದುಕಿನಲ್ಲಿ ತಂದೊಡ್ಡುವ ಆತಂಕಗಳ ಬಗೆಗೆ ಲೇಖಕರಲ್ಲಿ ವಿಷಾದ ವ್ಯಕ್ತಪಡಿಸಿದ್ದಾರೆ. ಇಂತಹವರಲ್ಲಿ ಕಟ್ಪಾಡಿಯವರು ಒಬ್ಬರಾಗಿದ್ದಾರೆ.

ಮುಸ್ಲಿಂ ಸಮಾಜದಲ್ಲಿ ಹೆಂಗಸರಿಗೆ ಕೊಡುತ್ತಿದ್ದ ಪ್ರಮುಖ ಸಮಸ್ಯೆ 'ತಲಾಖ್' ಇದನ್ನೇ ಕಟ್ಪಾಡಿಯವರು ತಮ್ಮ ಕಾದಂಬರಿಯಲ್ಲಿ ವಸ್ತುವನ್ನಾಗಿ ಆಯ್ಕೆ ಮಾಡಿಕೊಂಡು ಬರೆದರು. ಅಷ್ಟೆ ಅಲ್ಲದೆ ಗಮನಾರ್ಹವಾಗಿ ಚರ್ಚಿಸಿದರು ಹಾಗೂ ಕಟ್ಪಾಡಿಯವರು ತಮ್ಮ ಮೊದಲ ಕಾದಂಬರಿ 'ಸರಕು'ಗಳು ಕಾದಂಬರಿಯಲ್ಲಿ ಬಡ ಮುಸ್ಲಿಂ ಹೆಣ್ಣು ಮಕ್ಕಳ ದಯನೀಯ ಸ್ಥಿತಿಯ ಚಿತ್ರಣ ಕಂಡು ಬರುತ್ತದೆ. ಕನ್ನಡದಲ್ಲಿ ಇದುವರೆಗೂ ದಾಖಲಿಸದೇ ಇರುವ ಸಮಸ್ಯೆಯಿದು. ತಮ್ಮ ಹೆಣ್ಣು ಮಕ್ಕಳನ್ನು ಹಣಕ್ಕಾಗಿ ಅರಬರಿಗೆ ೨–೩ ತಿಂಗಳವರೆಗೆ ನಿಖಾಹ್ ಮಾಡಿಕೊಟ್ಟು ಆನಂತರ ತಲಾಖ್ ಪಡೆದು ಧರ್ಮದ ಶ್ರೀರಕ್ಷೆಯಲ್ಲಿ ಭಾರತವನ್ನು ಬಿಟ್ಟು ಅರಬದೇಶಕ್ಕೆ ಹಿಂದಿರುಗುವ ಶೇಖ್‌ಗಳ ಕಥೆಯಿದು. ಶೇಖ್‌ಗಳಿಂದ ಹುಟ್ಟಿದ ಮಕ್ಕಳು ಕೂಲಿನಾಲಿ ಮಾಡಿ ತಂದೆಯ ಆಶ್ರಯವಿಲ್ಲದೆ ಅಪಾರ ಕಷ್ಟ–ನಷ್ಟವನ್ನು, ನೋವು–ಹಸಿವು ಬಡತನಗಳಲ್ಲಿ ಬದುಕುವ ಕರುಣಾಜನಕ ಸ್ಥಿತಿ ಮತ್ತು ನಿರಪರಾಧಿ ಮಕ್ಕಳು ಹಾಗೂ ತಾಯಂದಿರ ದುರಂತದ ಕತೆಯನ್ನು ಅವರ ಬದುಕಿನ ಕ್ಷಣವನ್ನು ಈ ಕಾದಂಬರಿ ಹೇಳುತ್ತದೆ. ಅಕ್ಷರಶಹಃ ಈ ಕಾದಂಬರಿಯಲ್ಲಿ

ಹಾಜಿಮಾ, ಜುಲೇಖಾ, ಹಪ್ಸಾ, ಸರಕುಗಳೇ ಆಗಿದ್ದು ಹಣವಂತರು ತಮಗೆ ಬೇಕಾದ ಹಾಗೆ ಉಪಯೋಗಿಸಿ ಬೀಸಾಡುವುದು, ಬಹಳ ಸೂಕ್ಷ್ಮವಾಗಿ ಹೆಣ್ಣಿನ ದೇಹವನ್ನು ಧರ್ಮದ ಮುಸುಕಿನಲ್ಲಿ ಶೋಷಿಸುವ ಹಣವಂತರ ಕ್ರೌರ್ಯ ಇಲ್ಲಿದೆ. ಮುಸ್ಲಿಂ ಸಮಾಜದ ಹೆಣ್ಣುಗಳ ದುರಂತದ ಬದುಕನ್ನು ಬಹುಶಃ ಇವರಷ್ಟು ತೀವ್ರವಾಗಿ ಯಾವ ಕಾದಂಬರಿಯಲ್ಲೂ ಚಿತ್ರಿಸಿಲ್ಲ. ಇವು ಮುಸ್ಲಿಂ ಸಮಾಜದ ಸಾಚಾ ಅನುಭವಗಳೆಂದು ಹೇಳಬಹುದು. ಇಂತಹದೇ ವಸ್ತುವನ್ನು ಹೋಲುವ ಮತ್ತೊಂದು ಕತೆ ಬೊಳುವಾರ ಅವರ 'ಮುತ್ತುಚ್ಚೇರ'. ಈ ಕಾದಂಬರಿ ಪ್ರಕಟವಾದಾಗ ಅನೇಕ ದೇಶಗಳಿಂದ ಪ್ರಶಂಸೆಯ ಪತ್ರಗಳು ಮತ್ತು ಬೆದರಿಕೆಯ ಪತ್ರಗಳು ಬಂದವು. ಸಮಸ್ಯೆಯು ದಕ್ಷಿಣ ಕನ್ನಡ, ಉಡುಪಿ, ಕೇರಳದ ಭಾಗದಲ್ಲಿ ಕಂಡು ಬರುತ್ತವೆ ಆದರೆ ಉತ್ತರ ಕರ್ನಾಟಕಕ್ಕೆ ಈ ಸಮಸ್ಯೆವಿಲ್ಲವೆಂದೇ ಹೇಳಬಹುದು.

ಅವಗಣನೆಗೆ ಒಳಗಾದ ಎರಡನೇ ವರ್ಗದ ಪ್ರಜೆಯಾಗಿ ಪರಿಗಣಿಸಲ್ಪಟ್ಟಿರುವ ಸ್ತ್ರೀ ಸಮಾಜ ಕಟ್ಪಾಡಿಯವರ ಕಾಳಜಿಯ ವಲಯ. ಕಾಮದ ವಸ್ತುವಾಗಿ ಹೇರುವ ಯಂತ್ರವಾಗಿ, ನಾಲ್ಕು ಗೋಡೆಗಳ ಆರ್ಥಿಕ ಪರಾವಲಂಬನೆಯಿಂದಾಗಿ ದಾಸ್ಯ ಪ್ರವೃತ್ತಿಯನ್ನು ಮೈಗೂಡಿಸಿಕೊಂಡು ಅಬಲೆ ಎಂದು ಹೀನಾಯವಾಗಿ ಬದುಕು ಸಾಗಿಸುತ್ತಿರುವ ಮಹಿಳೆ ಕಟ್ಪಾಡಿಯವರ ಕಾದಂಬರಿಯಲ್ಲಿ ಕಾಣಿಸುತ್ತಾಳೆ. ಬರವಣಿಗೆ ತೊಡಗಿದ ಪ್ರಾರಂಭದಲ್ಲಿ ಕಟ್ಪಾಡಿ ಸಹಜವಾಗಿಯೇ ಪುರುಷಪ್ರಧಾನ ವ್ಯವಸ್ಥೆಯಡಿ ಬಲಿಪಶುಗಳಾಗಿರುವ ತನ್ನ ಸಮುದಾಯದ ಧ್ವನಿಯಾಗಿ ಅವರಿಗೊಂದು ಸಾಮಾಜಿಕ ನ್ಯಾಯ ದೊರಕಿಸಿಕೊಡಬೇಕೆಂಬ ಹುಮ್ಮಸ್ಸಿನಲ್ಲಿ ಬರೆದವರು. ಹೀಗೆ ಬರೆದು ಹಲವರ ವಿರೋಧ ಕಟ್ಟಿಕೊಂಡಾಗಲೂ ಎದೆಗುಂದಲಿಲ್ಲ. ಧರ್ಮದ ಬಗೆಗಿನ ಅಂದಶ್ರದ್ಧೆ ಈ ಜನರನ್ನು ದಿಕ್ಕು ತಪ್ಪಿಸುತ್ತಿರುವ ಧರ್ಮದ ಚುಕ್ಕಾಣಿ ಹಿಡಿದ ದಿಗ್ಗಜರ ರೀತಿ ನೀತಿಗಳು ಕಟ್ಪಾಡಿಯವರ ಕಾದಂಬರಿ ವಸ್ತುಗಳಾದವು.

ಮಹಿಳೆಯರ ಸಮಸ್ಯೆಗಳ ಕಡೆ ಬೆಳಕು ಚೆಲ್ಲುವ ಮೂಲಕ ಸಮಾಜ ಮತ್ತು ಚಿಂತನೆಗೆ ಮಾರ್ಗರೂಪಿಯಾದರು. ಇದಕ್ಕೆ ಸಾಕ್ಷಿಯಾಗಿ ಕಟ್ಪಾಡಿಯವರ 'ಕಚ್ಚಾದ' ಕಾದಂಬರಿಯಲ್ಲಿ ಮುಸ್ಲಿಂ ಪರಿತ್ಯಕ್ತ ಮಹಿಳೆಯ ಜೀವನದ ಹೋರಾಟವಿದೆ. ಬಡ ಮುಸ್ಲಿಂ ಕೂಲಿಕಾರರು ಮತ್ತು ಯಜಮಾನರ ನಡುವಿನ ಸಂಘರ್ಷವನ್ನು ಪ್ರಾಮಾಣಿಕತೆ, ನಿಯತ್ತು, ಹಣ ಉಳಿತಾಯದ ತಂತ್ರಗಳನ್ನು ಅನಾವರಣ ಮಾಡಿದ್ದಾರೆ. ಇದು ಬೊಳುವಾರ ಮಹಮ್ಮದ್ ಕುಂಞ 'ರೊಟ್ಟಿ ಫಾತಮ್ಮ'ಳ ಪಾತ್ರವನ್ನು ಹೋಲುತ್ತದೆ. ಕಚ್ಚಾದ ಯಾರ ಹಂಗಿನಲ್ಲಿ ಇರಲು ಬಯಸುವುದಿಲ್ಲ. ಸ್ವತಂತ್ರವಾಗಿ ಹೊಲಗದ್ದೆಗಳಲ್ಲಿ ಕೂಲಿ ಮಾಡುತ್ತ ಬದುಕು ಸಾಗಿಸುತ್ತಾಳೆ. ಗಂಡನಿಲ್ಲದ ಕಚ್ಚಾದಳಿಗೆ

ಅವಳ ಬಾಯಿಯೇ ಬಂಡವಾಳವಾಗುತ್ತದೆ. ಅವಳ ಹರಿತವಾದ ಮಾತುಗಳಿಂದ ಎಲ್ಲರ ಬಾಯಿ ಮುಚ್ಚಿಸುತ್ತಾಳೆ. ಕಚ್ಚಾದಳು ಚಾಲಕಿತನಕ್ಕೆ, ಬುದ್ಧಿವಂತಿಕೆಗೆ ಎಲ್ಲರೂ ಗೌರವ ಕೊಡುತ್ತಿದ್ದರು. ಒಮ್ಮೆ ಆ ಊರಿನ ಸಾಹುಕಾರ ಕೂಲಿಗಾಗಿ ಜೋಳ್ಳಭತ್ತ ಕೊಟ್ಟಾಗ ರಂಪಮಾಡಿ ಒಳ್ಳೆಯ ಭತ್ತವನ್ನು ತೆಗೆದುಕೊಳ್ಳುತ್ತಾಳೆ. ಇಲ್ಲಿ ಪುರುಷಪ್ರಧಾನ್ಯತೆಯು ಕಂಡುಬರುತ್ತದೆ. ಇದಕ್ಕೆ ಧರ್ಮ ಯಾವತ್ತೂ ಪುರುಷ ಪ್ರಧಾನ್ಯತೆಯನ್ನು ನಂಬಿಕೊಂಡೆ ಬಂದಿದೆ. ಧರ್ಮ, ಧರ್ಮಗ್ರಂಥ, ಧರ್ಮ ನಿಯಮಗಳ ಕರ್ತೃ ಪುರುಷ, ತನಗೆ ಅನುಕೂಲ ಸಿಂಧುವಾಗುವಂತೆ ಕಟ್ಟಳೆಗಳನ್ನು ನಿರ್ಮಿಸಿಕೊಂಡು ಬಂದಿದ್ದಾನೆ. ಕಟ್ಪಾಡಿಯವರ ಕಾದಂಬರಿಗಳಲ್ಲಿ ಮುಸ್ಲಿಂ ಸಮಾಜದ ಸ್ವರೂಪ ಎಂಬ ವಿಷಯವನ್ನು ಕುರಿತು ಅಧ್ಯಯನಕ್ಕೆ ತೊಡಗುವ ಮೊದಲು ಮುಸ್ಲಿಂ ಸಮಾಜ ಮತ್ತು ಸಾಹಿತ್ಯವನ್ನು ಗುರುತಿಸುವ ಕೆಲಸವನ್ನು ಇಲ್ಲಿ ಮಾಡಲಾಗಿದೆ. ನಂತರ ಕಟ್ಪಾಡಿಯವರ ಕಾದಂಬರಿಗಳ ವಸ್ತು, ದೃಷ್ಟಿ, ಸಂವೇದನೆಗಳ ಅನುಗುಣವಾಗಿ ಅಧ್ಯಾಯಗಳ ವರ್ಗೀಕರಣವನ್ನು ಮಾಡಿಕೊಳ್ಳುವುದರ ಮೂಲಕ ಇವರ ಕಾದಂಬರಿಗಳಲ್ಲಿನ ಹೆಣ್ಣು ವ್ಯಕ್ತಿಗತವಾಗಿ ಕ್ರಮೇಣ ವಿಕಾಸವಾಗುತ್ತಾ ಬಂದ ರೀತಿಯುನ್ನು ಕುಟುಂಬ, ಶಿಕ್ಷಣ, ಧರ್ಮ, ಸಂಪ್ರದಾಯ, ಉದ್ಯೋಗಗಳಲ್ಲಿ ಬದಲಾವಣೆಯಾಗುತ್ತಿರುವುದನ್ನು ಗುರುತಿಸಲಾಗಿದೆ. ಇಲ್ಲಿ ಅಧ್ಯಾಯಗಳ ಮೂಲಕ ಕಟ್ಪಾಡಿಯವರ ಕಾದಂಬರಿಗಳಲ್ಲಿ ಕಾಣುವ ಸ್ತ್ರೀ–ಪುರುಷಪಾತ್ರಗಳು, ಕುಟುಂಬ, ಬಡತನ, ವಿದ್ಯಾಭ್ಯಾಸ, ಮದುವೆ, ಸಮಪ್ರದಾಯಗಳು, ಧರ್ಮ, ಸಾಮಾಜಿಕ ಪರಿವರ್ತನೆಗಳು, ವರ್ಗತಾರತಮ್ಯವನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಈ ಸಂದರ್ಭಗಳಲ್ಲಿ ಹಲವು ಸಂವೇದನೆ ಹಾಗೂ ಜಗತ್ತುಗಳ ಪರಿಚಯವಾಗಿದೆ.

ಇವರು ಮುಸ್ಲಿಂ ಜನಾಂಗದ ಪ್ರತಿನಿಧಿಯಾಗಿ ಬರೆಯಲು ಪ್ರಾರಂಭಿಸಿ ತಮ್ಮ ಸಂವೇದನೆಗಳ ಮೂಲಕ ಜನರ ಬಳಿ ಬಹುಬೇಗನೆ ತಲುಪುವಂತಾದರು. ಅಷ್ಟೇ ಅಲ್ಲದೆ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮದೇ ಆದ ಸ್ಥಾನವನ್ನು ಹಾಗೂ ಗುರುತಿಸುವಿಕೆಯನ್ನು ಪಡೆದುಕೊಂಡವರು. ಅಷ್ಟೇ ಅಲ್ಲದೇ ಈ ಮಧ್ಯೆ ಹೆಚ್ಚು ಕಾಲ ಉಳಿಯಬಲ್ಲ ಲೇಖಕರ ಸ್ಥಾನಕ್ಕೆ ಸೇರಿದವರು. ಇವರ ಸಾಹಿತ್ಯಕ್ಕೆ ಸಂಬಂಧಪಟ್ಟಂತಹ ಸಾಧನೆ ಅಪಾರ. ಅಂತೆಯೇ ಇವರ ಕೃತಿಗಳು ಸಂಶೋಧನೆಗಳಿಗಾಗುವಷ್ಟು ಸಾಮಗ್ರಿಯಿದೆ. ವಿಶಾಲ ಸಾಗರದಲ್ಲಿ ಬೊಗಸೆ ನೀರು ಮಾತ್ರ ನನಗೆ ದಕ್ಕಿದ್ದು, ದಕ್ಕದೆ ಇರುವುದು ಇನ್ನೂ ಬಹಳಷ್ಟಿದೆ. ಅದು ಹೆಚ್ಚಿನ ಅಧ್ಯಯನ ಸಾಧ್ಯತೆಗಳಿಗೆ ದಾರಿಮಾಡಿಕೊಡುತ್ತದೆ.

# ಅಧ್ಯಯನ ಫಲಿತಗಳು

೧. ಬಂಡಾಯ ಸಾಹಿತ್ಯಗಳಲ್ಲಿ ಒಬ್ಬರಾದ ಕಟ್ಪಾಡಿಯವರು ಚಳುವಳಿಯಿಂದ ಬಂದವರು. ಅವರ ಅನುಭವ ಕೋಶದಲ್ಲಿ ಜನಸಂಸ್ಕೃತಿಯ ಹಾಡು, ಕತೆ, ನಾಟಕ ಲೋಕಗಳು ಅಡಕವಾಗಿವೆ. ಇದನ್ನು ಅವರ ಕಾದಂಬರಿಗಳ ಪಾತ್ರ ಚಿತ್ರಣಗಳಲ್ಲಿ ಒಂದು ಶಕ್ತಿಯಾಗಿ ದುಡಿಸಿಕೊಳ್ಳುತ್ತಾರೆ. ಹೀಗಾಗಿ ಅವರ ಕಾದಂಬರಿಗಳು ಮಹಿಳಾ ಪಾತ್ರಗಳನ್ನು ಚಿತ್ರಿಸುವಾಗ ವಿಷಾದ ಮತ್ತು ವಿಡಂಬನೆ ಮುಂತಾದ ಕಥನವಿಧಾನವನ್ನು ಬಳಸುತ್ತಾರೆ. ಕೆಳವರ್ಗದ ಪರವಾಗಿ ಮಾತನಾಡುತ್ತಾರೆ. ಈ ಮೂಲಕ ಮಹಿಳೆಯರ ಮನೋಲೋಕದ ತಲ್ಲಣಗಳನ್ನು, ಭಾವಭಂಗಿಗಳನ್ನು ಕಂಡುಕೊಳ್ಳಲಾಗಿದೆ.

೨. ಕಟ್ಪಾಡಿಯವರ ಕಾದಂಬರಿಗಳಲ್ಲಿ ಮಹಿಳೆಯರ ಹೋರಾಟದ ಚಿತ್ರಣವಿದೆ. ಪುರುಷಪ್ರಧಾನವಾದ ಸಮಾಜವು ಮಹಿಳೆಯನ್ನು ಧರ್ಮ, ಸಂಪ್ರದಾಯದ ಹೆಸರಿನಲ್ಲಿ ಶೋಷಿಸುತ್ತಿರುವುದನ್ನು ಅವರ ವಿರುದ್ಧ ಮಹಿಳೆ ಪ್ರತಿಭಟಿಸುವುದನ್ನು ಕಟ್ಪಾಡಿಯವರ ಕಾದಂಬರಿಗಳಲ್ಲಿ ಕಂಡುಕೊಂಡಿದೆ.

೩. 'ಹೆಣ್ಣಿಗೆ ಹೆಣ್ಣೆ ಶತ್ರು' ಎಂಬ ನುಡಿಗಟ್ಟು ಸಾಂಪ್ರದಾಯಿಕ ಗ್ರಹಿಕೆಯ ಪ್ರಭುತ್ವದಲ್ಲಿದೆ. ಇದಕ್ಕೆ ಪ್ರತಿಯಾಗಿ ಇಲ್ಲಿನ ಸ್ತ್ರೀಯರು ಅನ್ಯೋನ್ಯತೆಯಿಂದಿರುವುದು ಕಂಡುಬರುತ್ತದೆ. ನೂರು ಜನ ಗಂಡಸರನ್ನು ಒಂದೆಡೆ ಕೂಡಿಸಬಹುದು ಎರಡು ಜಡೆಗಳನ್ನು ಒಂದೆಡೆ ಸೇರಿಸಲು ಸಾಧ್ಯವಿಲ್ಲ ಎಂಬ ಮಾತನ್ನು ಕಾದಂಬರಿಯಲ್ಲಿ ಬರುವ ಪಾತ್ರಗಳ ಮೂಲಕ ಸುಳ್ಳುಮಾಡುವುದನ್ನು ಗಮನಿಸಬಹುದು.

೪. ಇಲ್ಲಿನ ಪುರುಷ ಪಾತ್ರಗಳು ಹಣ, ಅಧಿಕಾರಕ್ಕಾಗಿ, ಪುರುಷಾಧಿಪತ್ಯಕ್ಕಾಗಿ ಹಂಬಲಿಸುತ್ತವೆ. ನಮ್ಮ ಹೆಣ್ಣುಮಕ್ಕಳು ಹೇಗಿದ್ದರೇನು? ತಾನು ಚೆನ್ನಾಗಿರಬೇಕು ಎನ್ನುತ್ತೇವೆ. ಹೆಣ್ಣು ಪಾತ್ರಗಳು ಕೌಟುಂಬಿಕ ವಲಯದ ತಲಾಖ್‌ನ ತೂಗುಗತ್ತಿಯಿಂದ ನರಳುತ್ತಿರುವುದನ್ನು ಮತ್ತು ಅದಕ್ಕೆ ಪೂರಕವಾತಾವರಣ ದೊರೆತಾಗ ತಪ್ಪಿಸಿಕೊಳ್ಳಲು ಪ್ರಯತ್ನಿಸುವುದನ್ನು ಕಂಡುಕೊಳ್ಳಲಾಗಿದೆ.

೫. ಕಟ್ಪಾಡಿಯವರ ಕಾದಂಬರಿಗಳಲ್ಲಿ ಬರುವ ಮುಸ್ಲಿಂ ಧರ್ಮದ ಸನಾತನಿಗಳು ಪುರುಷರು, ಮುಸ್ಲಿಂ ಸ್ತ್ರೀಪಾತ್ರಗಳಿಗೆ ಶಿಕ್ಷಣ ಪಡೆಯುವ ಹಾಗೂ ಧಾರ್ಮಿಕವಾಗಿಯೇ ನೀಡಲ್ಪಟ್ಟ ಹಕ್ಕುಗಳನ್ನು ನಿರಾಕರಿಸುವುದರೊಂದಿಗೆ ಹೆಂಗಸರನ್ನು ಕತ್ತಲೆಯಲ್ಲಿಡುವ ಪ್ರಯತ್ನ ಮಾಡುತ್ತದೆ. ಸ್ತ್ರೀಗೆ ಶಿಕ್ಷಣವನ್ನು ನೀಡಲು ಅನೇಕ ಅವಕಾಶಗಳು ಇದ್ದಾಗ್ಯೂ ಸಹ ಧರ್ಮದ ಹೆಸರಿನಲ್ಲಿ ಅವಳನ್ನು ಶಿಕ್ಷಣದಿಂದ ವಂಚಿಸಲಾಗಿದೆ ಎಂಬುದನ್ನು ಕಂಡುಕೊಳ್ಳಲಾಗಿದೆ.

೬. ಈ ಕಾದಂಬರಿಯಲ್ಲಿ ಬಡವರು ಸಂಪ್ರದಾಯಗಳನ್ನು ಮುರಿಯುವುದು ಸಾಮಾನ್ಯವಾದರೂ, ಶಿಕ್ಷಣದ ಪ್ರಭಾವದಿಂದಾಗಿ ಹಲವು ಶ್ರೀಮಂತ ಪುರುಷರು ತಲೆತಲಾಂತರದಿಂದ ಬಂದ ತಮ್ಮ ರೀತಿ ರಿವಾಜುಗಳನ್ನು, ಸಂಪ್ರದಾಯಗಳನ್ನು ಮುರಿಯುತ್ತಿರುವುದನ್ನು ಗಮನಿಸಲಾಗಿದೆ.

೭. ಈ ಕಾದಂಬರಿಯಲ್ಲಿ ಬರುವ ಹೆಣ್ಣು ಮಕ್ಕಳ ಅನೇಕ ಸಮಸ್ಯೆಗಳಿವೆ. ಬಡತನ, ಹಸಿವು, ಈ ಕಾರಣಕ್ಕಾಗಿ ವಿವಾಹದ ಹೆಸರಿನಲ್ಲಿ ದುಡ್ಡಿನ ಧಣಿಗಳಿಗೆ ಅವರ ಕಾಮತೃಷೆಗೆ ಧರ್ಮದ ಹೆಸರಿನಲ್ಲಿ ಬಲಿಯಾಗುವುದನ್ನು ಮತ್ತು ಅದೇ ಧರ್ಮದ ಆಸರೆಯಲ್ಲಿ ದುಡ್ಡಿನ ಧಣಿಗಳು ತಪ್ಪಿಸಿಕೊಳ್ಳುವುದನ್ನು ಕುರಿತು ಚರ್ಚಿಸಲಾಗಿದೆ.

೮. ಕಟ್ಪಾಡಿಯವರ ಕಾದಂಬರಿಯಲ್ಲಿ ಬರುವ ಕುಟುಂಬವು ಪಿತೃಪ್ರಧಾನ ಅಧಿಕಾರವುಳ್ಳ ಮಾತೃಪ್ರಧಾನ ಸಂಸ್ಕೃತಿಯದು, ಇಲ್ಲಿ ಮಹಿಳೆ ಪುರುಷನ ಅಡಿಯಾಳು ಆಗಿ ಬದುಕುತ್ತಿರುವುದನ್ನು ಮತ್ತು ನಾಲ್ಕು ಗೋಡೆಯ ಬಂಧನದಲ್ಲಿಡುರುತ್ತಾ ತನ್ನ ತಲ್ಲಣಗಳನ್ನು ವ್ಯಕ್ತಪಡಿಸುವುದನ್ನು ಗಮನಿಸಲಾಗಿದೆ.

೯. ಮುಸ್ಲಿಂ ಸಮಾಜದಲ್ಲಿ ಪುರುಷಪ್ರಧಾನ ವ್ಯವಸ್ಥೆಯು ಜಾರಿಗೊಳಿಸುವ ಕಾಯ್ದೆ, ಕಾನೂನುಗಳನ್ನು ಪುರುಷರೇ ಮುರಿದರು. ಅದು ಮಹಿಳೆಯರಿಗೆ ಮಾರಕವಾದರೂ ತನ್ನ ಇರುವಿಕೆಯನ್ನು ಗಮನಿಸದೇ ಆ ಕಾನೂನು, ಕಾಯ್ದೆಗಳನ್ನು ಶ್ರದ್ಧೆಯಿಂದ ಪಾಲಿಸುತ್ತಿರುವುದು ಮಹಿಳೆ ಎಂಬುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

೧೦. ಕಟ್ಪಾಡಿ ಕಾದಂಬರಿಯಲ್ಲಿ ಹೆಣ್ಣಾದವಳು ಮೇಲ್ವರ್ಗದವಳಾಗಿರಲಿ, ಕೆಳವರ್ಗದವರಾಗಲಿ ಕಷ್ಟ ಆಕೆಗೆ ಕಟ್ಟಿಟ್ಟ ಬುತ್ತಿ ಎಂಬಂತಹ ಸಮಾಜವನ್ನು ಈ ಕಾದಂಬರಿಗಳು ತೋರುತ್ತವೆ. ಕೌಟುಂಬಿಕ ಸಮಸ್ಯೆಯಲ್ಲಿ ಸಿಲುಕಿರುವ ಮಹಿಳೆಯರಿಗೆ ಸಾಂತ್ವನ ಹೇಳುವ ಮಹಿಳೆಯರು ಬಹಳ ಇದ್ದಾರೆ. ಹಸಿವನ್ನು ನೀಗಿಸಿಕೊಳ್ಳಲಾರದ ಸ್ಥಿತಿಯಲ್ಲಿರುವವರಿಗೆ ಇರುವ ಆಹಾರದಲ್ಲಿ ಹಂಚಿ ತಿನ್ನುವ ವಿಶಾಲ ಮನೋಭಾವದ ಮಹಿಳೆಯರು ಇದ್ದಾರೆ ಎಂಬುದನ್ನು ಗಮನಿಸಲಾಗಿದೆ.

೧೧. ಕಟ್ಪಾಡಿ ಅವರ ಕಾದಂಬರಿಗಳಲ್ಲಿ ಮಹಿಳಾಪಾತ್ರಗಳು ಬಹುರೂಪಿಯಾಗಿವೆ. ಇಲ್ಲಿ ಬೇರೆಬೇರೆ ಮನಸ್ಸಿನ, ಬೇರೆಬೇರೆ ಅಂತಸ್ಥಿನ, ಬೇರೆ ಬೇರೆ ಮನೋಭಾವದ, ಬೇರೆಬೇರೆ ವರ್ಗದ ಮಹಿಳೆಯರು, ಗೃಹಿಣಿಯರು, ದುಡಿಮೆಗಾರರು, ಪ್ರತಿಭಟನೆ ಮಾಡುವವರು ಹೀಗೆ ಕರಾವಳಿಯ ಮುಸ್ಲಿಂ ಸಮುದಾಯದ ಬಹುರೂಪಿ ಮಹಿಳಾಪಾತ್ರಗಳನ್ನುಇವರ ಕಾದಂಬರಿಯಲ್ಲಿ ಕಂಡುಕೊಳ್ಳಲಾಗಿದೆ.

೧೨. ಮುಸ್ಲಿಂ ಸಮಾಜದಲ್ಲಿ ಮಹಿಳೆಯರು ಹಲವು ವಿಧದಲ್ಲಿ ಸಾಮಾಜಿಕ ಮತ್ತು ಧಾರ್ಮಿಕ ಶೋಷಣೆಗೆ ಒಳಗಾಗುತ್ತಿದ್ದಾರೆ. ಎಂಬುದನ್ನು ಕಟ್ಪಾಡಿ ಅವರ ಕಾದಂಬರಿ ನಿರೂಪಿಸುತ್ತವೆ. ಧರ್ಮದ ಹೆಸರಿನಲ್ಲಿ ಸಮಾಜದಲ್ಲಿ ನಡೆಯುತ್ತಿರುವ ಹಲವು ಕಾರ್ಯಗಳನ್ನು ಅವು ಕಟ್ಟಿಕೊಡುತ್ತವೆ. ತಲಾಖ್, ಇದ್ದತ್, ಹಾಗೂ ಬುರ್ಖಾಪದ್ಧತಿಯಿಂದ ನಲುಗುವ ಸ್ತ್ರೀಯರು ಇಲ್ಲಿದ್ದಾರೆ. ಷರಿಯತ್ ಕಾನೂನುಗಳನ್ನು ಪುರುಷರು ತಮ್ಮ ಸ್ವಾರ್ಥಕ್ಕೆ ತಕ್ಕಂತೆ ಬಳಸಿಕೊಳ್ಳುವ ಮೂಲಕ ಸ್ತ್ರೀಯರ ಹಕ್ಕನ್ನು ಕಸಿದುಕೊಳ್ಳುವುದನ್ನು ಕಾದಂಬರಿಯಲ್ಲಿ ಕಾಣಿಸುತ್ತದೆ. ಅದರಲ್ಲೂ ಈ ತಲಾಖ್ ನಿಯಮವು ಸ್ತ್ರೀಯರಿಗೆ ಒಂದು ಶಾಪವೆಂಬಂತೆ ಚಿತ್ರಿತವಾಗಿದೆ. ಈ ತಲಾಖ್‌ನಿಂದ ಸ್ತ್ರೀಯರ ಬಾಳು ಸಂಕಟಕ್ಕೆ ಸಿಲುಕಿ ಅಸ್ತಿತ್ವವೇ ಇಲ್ಲದಂತಾಗುತ್ತದೆ.

೧೩. ಭಾರತದಲ್ಲಿ ಸಾಮಾನ್ಯವಾಗಿ ಮಹಿಳೆಯರು ಆಧುನಿಕ ಶಿಕ್ಷಣದಿಂದ ವಂಚಿತರಾಗಿದ್ದಾರೆ. ಅವರ ಶಿಕ್ಷಣದ ಬಗ್ಗೆ ಸಾಂಪ್ರದಾಯಿಕ ಸಮಾಜ ಅಷ್ಟು ಗಮನ ಕೊಡುವುದಿಲ್ಲ. ಹಾಗಾಗಿ ಮಹಿಳೆಯರಲ್ಲಿ ಅನಕ್ಷರಸ್ಥರ ಪ್ರಮಾಣ ಕಂಡುಬಂದಿದೆ. ಮಹಿಳೆಯರಿಗೆ ಧಾರ್ಮಿಕ ಕಾರಣಗಳಿಂದ ಅವರ ಸಾಮಾಜಿಕ ಬದುಕು ಕಡಿಮೆಗೊಳುವ ಸನ್ನಿವೇಶಗಳಿವೆ. ಆದರೆ ನಿಜವಾದ ಕಾರಣ ಸಾಮಾಜಿಕವಾದುದು. ಮಹಿಳೆಯರಿಗೆ ಶಿಕ್ಷಣ ಏಕೆ ಬೇಕು, ಅವರು ಮಾಡುವುದು ಮನೆಗೆಲಸ ಎಂಬ ಪುರುಷಪ್ರಧಾನ ಧೋರಣೆಯಿಂದಲೇ ಅವರಿಗೆ ಶಿಕ್ಷಣ ಸಿಕ್ಕಿಲ್ಲ. ಮುಸ್ಲಿಂ ಸಮಾಜದಲ್ಲಿ ಈ ಬಗೆಯ ಧೋರಣೆಗೆ ಮಹಿಳೆ ಅನಕ್ಷರತೆ ಹೆಚ್ಚು ಪ್ರಮಾಣದಲ್ಲಿದೆ. ಅಂತಹ ಒಂದು ಸಮುದಾಯವನ್ನು ಆಧಾರವಾಗಿಟ್ಟುಕೊಂಡು ಕಟ್ಪಾಡಿ ಅವರು ಕಾದಂಬರಿ ಸೃಷ್ಟಿಯಾಗಿದೆ. ಈ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ.

೧೪. ಇಲ್ಲಿ ಬರುವ ಮಹಿಳಾ ಪಾತ್ರಗಳು ಬೇರ ಬೇರೆ ಬಗೆಯ ಸಮಸ್ಯೆ ಎದುರಿಸುತ್ತವೆ. ಅವುಗಳಲ್ಲಿ ಶಿಕ್ಷಣವನ್ನು ಪಡೆಯುವ ಸಮಸ್ಯೆಯೂ ಒಂದು ಸಾಮಾನ್ಯವಾಗಿ ಅವರಿಗೆ ಧಾರ್ಮಿಕ ಶಿಕ್ಷಣವನ್ನು ಮದರಸಾಗಳಲ್ಲಿ ಕೊಡಲಾಗುತ್ತದೆ. ಆದರೆ ಸಾಮಾಜಿಕ ಬದುಕಿಗೆ ಹೋಗಲು ಸಾಧ್ಯತೆ ಇರುವ ಆಧುನಿಕ ಶಿಕ್ಷಣವನ್ನು ಕೊಡಲು ನಿರಾಕರಿಸಲಾಗುತ್ತದೆ. ಇಂತಹ ಶಿಕ್ಷಣ ನಿರಾಕರಣೆಗೆ ಒಳಗಾಗಿರುವ ಪಾತ್ರಗಳು ಇಲ್ಲಿ ಬರುತ್ತವೆ. ವ್ಯಂಗ್ಯವೆಂದರೆ ಸ್ವಂತ ಕುಟುಂಬದಲ್ಲಿ ತಾಯಿಯಾದವಳು ಮಗಳಿಗೆ ಶಿಕ್ಷಣವನ್ನು ನಿರಾಕರಿಸುವ ಕೆಲಸದಲ್ಲಿ ತೊಡಗಿಸುವುದು. ಇಂತಹದೊಂದು ಸನ್ನಿವೇಶದಲ್ಲಿ ಶಿಕ್ಷಣ ಪಡೆಯಲು ಹೋರಾಡುವ ಪಡೆಯದೇ ಸೋಲುವ ಮತ್ತು ಪರಿತಾಪ ಪಡುವ ಹಲವಾರು ಪಾತ್ರಗಳನ್ನು ಕಾದಂಬರಿ ಚಿತ್ರಿಸುತ್ತದೆ. ಕಟ್ಪಾಡಿಯವರ ಕಾದಂಬರಿಗಳಲ್ಲಿ ಮಹಿಳೆಯರು ಶಿಕ್ಷಣದಿಂದ ವಂಚಿತರಾಗಿರುವ ಬಗ್ಗೆ ಆಳವಾದ ವೇದನೆ ಇರುವುದನ್ನು ಗಮನಿಸಲಾಗಿದೆ.

೧೫. ಕಟ್ಪಾಡಿ ಅವರು ಮಹಿಳೆಯರ ಶ್ರಮ ಮತ್ತು ಹೋರಾಟ, ಮಹಿಳೆಯರು ತೋರುವ ಜಾಣ್ಮೆ ಇತ್ಯಾದಿಗಳನ್ನು ಶ್ರದ್ಧೆಯಿಂದ ಚಿತ್ರಿಸುತ್ತಾರೆ. ಮಹಿಳೆಯರು ತೋರುವ ಜಾಣ್ಮೆ, ಕ್ರೀಯಾಶೀಲತೆ, ಪಡುವ ಸಂಕಟ, ಕಷ್ಟ ಇತ್ಯಾದಿಗಳಿಗೆಲ್ಲ ಕಾರಣವಾಗುವುದು ಆರ್ಥಿಕ ಮತ್ತು ಸಾಮಾಜಿಕ ಅನಿವಾರ್ಯತೆ ಈ ಹಿನ್ನೆಲೆಯಲ್ಲಿ ಮಹಿಳೆಯರಲ್ಲಿ ಹೋರಾಟ ಗುಣ, ಜಾಣ್ತನ, ಸಹನಾಶೀಲತೆ, ತ್ಯಾಗಮನೋಭಾವ, ಕಾಳಜಿ ಮುಂತಾದ ಜೀವನ ಮೌಲ್ಯಗಳು ಪ್ರಕಟವಾಗುತ್ತವೆ. ಕಟ್ಪಾಡಿಯವರ ಕಾದಂಬರಿ ಮಕ್ಕಳ ಶ್ರೇಯೋಭಿವೃದ್ಧಿಯಿಂದ ಕೂಡಿದರೂ ಮಹಿಳೇಯರ ಲೋಕವನ್ನು ಚಿತ್ರಿಸುವುದು ಮುಖ್ಯ ಉದ್ದೇಶವಾಗಿರುವುದು ಕಂಡುಕೊಳ್ಳಲಾಗಿದೆ.

೧೬. ಕಟ್ಪಾಡಿಯವರ ಕಾದಂಬರಿಗಳ ಶೀರ್ಷಿಕೆಗಳು ಮಹಿಳೆಯರ ಹೆಸರನ್ನು ಉಳ್ಳವಾಗಿವೆ. ಈ ಮೂಲಕ ಕಟ್ಪಾಡಿ ಅವರ ಕಾದಂಬರಿಗಳ ಪ್ರಧಾನವಸ್ತು ಮಹಿಳಾ ಜಗತ್ತಿಗೆ ಸಂಬಂಧಿಸಿದ್ದಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಇವರ ಕಾದಂಬರಿಗಳು ಮಹಿಳೆಯರ ಸಂವೇದನೆಗಳನ್ನು ದುಃಖದುಮ್ಮಾನಗಳನ್ನು, ತಲ್ಲಣಗಳನ್ನು ಹಾಗೂ ಆಲೋಚನೆಗಳನ್ನು ಕೇವಲ ಮಹಿಳೆಯರು ಬರೆಯುವ ಬರವಣಿಗೆ ಮಾತ್ರ ಚಿತ್ರಿಸುತ್ತಿಲ್ಲ. ಮಹಿಳಾ ಸಂವೇದನೇ ಸೂಕ್ಷ್ಮತೆಯುಳ್ಳ ಪುರುಷ ಲೇಖಕರಲ್ಲಿ ಇರಲು ಸಾಧ್ಯವಿದೆ ಎಂಬುದನ್ನು ಕಂಡುಕೊಳ್ಳಲಾಗಿದೆ.

**ಪ್ರಧಾನ ಆಕರಗಳು:**

೧. ಫಕೀರ್ ಮುಹಮ್ಮದ್ ಕಟ್ಪಾಡಿ, ೧೯೮೯, 'ಸರಕುಗಳ' ನವಕರ್ನಾಟಕ ಪ್ರಕಾಶನ ಬೆಂಗಳೂರು.

೨. ಫಕೀರ್ ಮುಹಮ್ಮದ್ ಕಟ್ಪಾಡಿ, ೧೯೯೭, ಕಚ್ಚಾದ, ಕಾಮದೇನು ಪ್ರಕಾಶನ ಬೆಂಗಳೂರು.

**ಪರಾಮರ್ಶನ ಗ್ರಂಥಗಳು:**

೧. ಅಬ್ದುಲ್ ರಶೀದ್, ೧೯೯೦, ಹಾಲು ಕುಡಿದ ಹುಡುಗಾ, ಸಂಗತಿ ಪ್ರಕಾಶನ.

೨. ಅಶೋಕ್ ಟಿ.ಪಿ, ೧೯೯೩, ಪುಸ್ತಕ ಪ್ರೀತಿ, ವಸಂತ ಪ್ರಕಾಶನ ಬೆಂಗಳೂರು.

೩. ಇಜ್ಲಂಗೋಡು ಬಿ.ಎಂ, ೨೦೧೧, ಬ್ಯಾರಿಭಾಷೆ, ಸಂಸ್ಕೃತಿ ಸಂಶೋಧನಾ ಗ್ರಂಥ(ಸಂ), ಸಾಹಿತ್ಯ ಅಕಾಡೆಮಿ ಮಂಗಳೂರು.

೪. ಕೋದಂಡರಾಮ ಎನ್.ಕೆ, ೧೯೯೬, ಕನ್ನಡ ಕಥಾಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ, ರೂಪ ಪ್ರಕಾಶನ ಮೈಸೂರು.

೫. ಜ್ಯೋತಿ ಶಶಿಕುಮಾರ್, ೨೦೦೭, ಮಹಿಳಾ ಸಾಮಾಜಿಕತೆ, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬. ಫಕೀರ್ ಮುಹಮ್ಮದ್ ಕಟ್ಪಾಡಿ, ೧೯೯೦, ನೋಂಬು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು.

೭ ಫಕೀರ್ ಮುಹಮ್ಮದ್ ಕಟ್ಪಾಡಿ, ೨೦೧೪, ದಜ್ಜಾಲ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.

೮. ಬಸವರಾಜ ಸಬರದ, ೧೯೯೪, ಸಾಹಿತ್ಯ ಸಂಗತಿ, ಪಲ್ಲವಿ ಪ್ರಕಾಶನ ಗುಲ್ಬರ್ಗಾ.

೯. ಬಾನು ಮುಷ್ತಾಕ್, ೧೯೯೪, ಹೆಜ್ಜೆ ಮೂಡಿದ ಹಾದಿ, ಸಂವಾದ ಪ್ರಕಾಶನ ಮಲ್ಲಾಡಿಹಳ್ಳಿ.

೧೦. ಬೊಳವಾರು ಮಹಮ್ಮದ್ ಕುಂಞ, ೧೯೮೭, ಜೆಹಾದ್, ನವಕರ್ನಾಟಕ ಪ್ರಕಾಶನ ಬೆಂಗಳೂರು.

೧೧. ಬೊಳವಾರು ಮಹಮ್ಮದ್ ಕುಂಞ, ೨೦೦೮, ದೇವರುಗಳ ರಾಜ್ಯದಲ್ಲಿ, ಪ್ರಗತಿ ಗ್ರಾಫಿಕ್ಸ್ ಬೆಂಗಳೂರು.

೧೨. ಬೊಳವಾರು ಮಹಮ್ಮದ್ ಕುಂಞ, ೨೦೦೫, ಆಯ್ದ ಕಥೆಗಳು, ಕಾಮದೇನು ಪ್ರಕಾಶನ ಬೆಂಗಳೂರು.

೧೩. ಮಲ್ಲಿಕಾ ಎಸ್ ಘಂಟಿ, ೧೯೯೪, ಕನ್ನಡ ಮಹಿಳಾ ಕಥಾ ಸಾಹಿತ್ಯ, ಯುವ ಲೋಕ ಪ್ರಕಾಶನ ಧಾರವಾಡ.

೧೪. ರಮೇಶ್, ೨೦೧೪, ಧಾರ್ಮಿಕ ಮತಾಂತರ: ಸಂವಿಧಾನಿಕ ದೃಷ್ಟಿಕೋನ, ಪ್ರಸಾರಂಗ ಮೈಸೂರು ವಿವಿ ಮೈಸೂರು.

೧೫. ರಂಗರಾಜ ವನದುರ್ಗ(ಸಂ), ೨೦೦೨, ಬಂಡಾಯ ಸಾಹಿತ್ಯ ಸಂವೇದನೆ, ಕನಕ ಸಾಹಿತ್ಯ ಪ್ರತಿಷ್ಠಾನ ಬೆಂಗಳೂರು.

೧೬. ರಹಮತ್ ತರೀಕೆರೆ, ೨೦೧೦, ಧರ್ಮ ಪರೀಕ್ಷೆ, ನವಕರ್ನಾಟಕ ಪ್ರಕಾಶನ ಬೆಂಗಳೂರು.

೧೭. ವಿಜಯಾ(ಸಂ), ೧೯೯೭, ಸಣ್ಣ ಕತೆಯಸೊಗಸು, ಗೀತಾಹೌಸ್ ಬುಕ್ ಮೈಸೂರು.

೧೮. ವಿಠಲರಾವ್ ಟಿ ಗಾಯಕ್ವಾಡ್(ಅನು), ೨೦೦೨, ಸ್ತ್ರೀವಾದಿ ವಿಮರ್ಶೆ: ಸ್ವರೂಪ ಮತ್ತು ಪರಿಕಲ್ಪನೆಗಳು, ಮರಾಠಿ ಮೂಲ: ಅಶ್ವಿನಿ ಧೋಂಗಡೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

೧೯. ವಿಠಲರಾವ್ ಟಿ ಗಾಯಕ್ವಾಡ್(ಅನು), ೨೦೧೦, ಭಾರತೀಯ ಸ್ತ್ರೀ ಜೀವನ, ಮರಾಠಿ ಮೂಲ: ಲೀಲಾ ಪಾಟೀಲ, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

೨೦.ವೆಂಕಟಗಿರಿ ದಳವಾಯಿ(ಸಂ), ೨೦೦೮, ಸಂಸ್ಕೃತಿ ಮಹಿಳಾ ಮಾಲಿಕೆ–೨, ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು.

೨೧. ಷರೀಫಾ .ಕೆ, ೨೦೧೧, ಮುಸ್ಲಿಂ ಮಹಿಳಾ ಲೋಕದ ತಲ್ಲಣಗಳು, ಬಸವ ಪ್ರಕಾಶನ ಮತ್ತು ಪುಸ್ತಕ ವ್ಯಾಪರಿಗಳು ಗುಲಬರ್ಗಾ.

೨೨. ಸನದಿ ಬಿ.ಎ, ೨೦೧೬, ಬುರ್ಖಾದ ಹುಡುಗಿ(ಅನು), ಕುವೆಂಪು ಭಾಷಾ ಭಾರತಿ ಪ್ರಾಧಿಕಾರ ಬೆಂಗಳೂರು.

೨೩. ಸಬಿಹಾ ಭೂಮಿಗೌಡ, ನಿಲುಮೆ, ಶಕ್ತಿ ಪ್ರಿಂಟರ್ಸ್ ಅಂಡ್ ಪಬ್ಲಿಕೇಷನ್ ಬೆಂಗಳೂರು.

೨೪. ಸವಿತಾ ಕೊಟಬಾಗಿ, ೨೦೧೦, ಕನ್ನಡ ಸಾಹಿತ್ಯ ಪರಂಪರೆ: ಮುಸ್ಲಿಂ ಸಂವೇದನೆ, ಆತ್ಮಶ್ರೀ ಪ್ರಕಾಶನ

೨೫. ಸಾರಾ ಅಬೂಬಕ್ಕರ್, ೧೯೯೭, ಲೇಖನಗುಚ್ಛ, ಚಂದ್ರಗಿರಿ ಪ್ರಕಾಶನ ಬೆಂಗಳೂರು.

೨೬. ಸಾರಾ ಅಬೂಬಕ್ಕರ್, ೨೦೦೧, ಅನಾವರಣ, ಚಂದ್ರಗಿರಿ ಪ್ರಕಾಸನ ಬೆಂಗಳೂರು.

೨೭. ಸಾರಾ ಅಬೂಬಕ್ಕರ್, ೨೦೦೨, ಸಹನಾ, ಚಂದ್ರಗಿರಿ ಪ್ರಕಾಶನ ಮಂಗಳೂರು.

೨೮. ಸಾರಾ ಅಬೂಬಕ್ಕರ್, ೨೦೦೬, ಚಂದ್ರಗಿರಿ ತೀರದಲ್ಲಿ, ಚಂದ್ರಗಿರಿ ಪ್ರಕಾಶನ ಮಂಗಳೂರು.

೨೯. ಸಾರಾ ಅಬೂಬಕ್ಕರ್, ೨೦೦೭, ಸಾಹಿತ್ಯ, ಸಂಸ್ಕೃತಿ ಮತ್ತು ಮಹಿಳೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ

೩೦. ಸಾರಾ ಅಬೂಬಕ್ಕರ್, ೨೦೧೦, ಚಪ್ಪಲಿಗಳು, ಚಂದ್ರಗಿರಿ ಪ್ರಕಾಶನ ಮಂಗಳೂರು.

೩೧. ಹನುಮಂತಯ್ಯ, ೧೯೯೯, ಕಥಾಕಥನ, ಸಿ.ವಿ.ಜಿ ಪ್ರಕಾಶನ ಬೆಂಗಳೂರು.

